KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜುಲೈ ೬, ೨೦೦೬ (ಆಷಾಢ ೧೫, ಶಕ ವರ್ಷ ೧೯೨೮) | ಸಂಚಿಕೆ ೨೭ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

### ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರ ಕಛೇರಿಯ ಪ್ರಕಟಣೆ

**ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ:ಎ3.ಎಸ್‌ಎಎಸ್.ಸಿಆರ್ 14/06-07, ದಿನಾಂಕ: 19ನೇ ಜೂನ್ 2006**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಬೆಂಗಳೂರು ಗ್ರಾಮಾಂತರ ಅರಣ್ಯ ವಿಭಾಗದ ಮಾಗಡಿ ಅರಣ್ಯ ವಲಯದ ನೆಡುತೋಪುಗಳಲ್ಲಿ ಕತ್ತಾವಣೆ ಮಾಡಿದ ನೀಲಗಿರಿ ಮರಗಳಿಂದ ಲಭ್ಯವಾದ ಟಿಂಬರನ್ನು ವಲಯ ಅರಣ್ಯಾಧಿಕಾರಿಗಳ ಕಛೇರಿ ಆವರಣದಲ್ಲಿ ಲಾಟು ಮಾಡಿದ್ದು ಇವುಗಳನ್ನು ಬಹಿರಂಗ ಹರಾಜು ಮೂಲಕ ದಿನಾಂಕ:18.7.2006 ರಂದು ಬೆಳಿಗ್ಗೆ 11.30 ಗಂಟೆಗೆ ಮಾಗಡಿ ಪ್ರಾದೇಶಿಕ ಅರಣ್ಯ ವಲಯ ಕಛೇರಿ ಆವರಣದಲ್ಲಿ ಕೆಳಸಹಿದಾರರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕೃತ ಅಧಿಕಾರಿಯು ಕೆಳಕಂಡ ಷರತ್ತುಗಳ ಮೇಲೆ ಬಹಿರಂಗ ಹರಾಜನ್ನು ಮಾಡಲು ಉದ್ದೇಶಿಸಿ ಪ್ರಕಟಣೆ ಹೊರಡಿಸಲಾಗಿದೆ.

1) ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು 5,000/- ರೂ.ಗಳ ಇ.ಎಂ.ಡಿ. (ಠೇವಣಿ)ಯನ್ನು ಬಹಿರಂಗ ಹರಾಜಿಗೆ ಒಂದು ಗಂಟೆ ಮುಂಚೆ ಪಾವತಿಸಬೇಕು.
2) ಹರಾಜಿನಲ್ಲಿ ಭಾಗವಹಿಸುವ ಮೊದಲು ಷೆಡ್ಯೂಲಿನಲ್ಲಿ ನಮೂದಿಸಿರುವ ಇಡಿಗಂಟನ್ನು (EMD) ನಗದು ರೂಪದಲ್ಲಿ ಪಾವತಿಸತಕ್ಕದ್ದು.
3) ಷೆಡ್ಯೂಲ್‌ನಲ್ಲಿ ಸೂಚಿಸಿರುವ ನಿಗದಿತ ಸಮಯ ಮತ್ತು ದಿನಾಂಕದಂದು ಬಹಿರಂಗ ಹರಾಜನ್ನು ನಡೆಸಲಾಗುವುದು.
4) ಇಡಿಗಂಟನ್ನು ಜಮಾ ಮಾಡದೇ ಬಿಡ್‌ದಾರರು ಹರಾಜಿನಲ್ಲಿ ಭಾಗಹಿಸುವ ಹಕ್ಕು ಇರುವುದಿಲ್ಲ.
5) ಷೆಡ್ಯೂಲ್‌ನಲ್ಲಿ ಸೂಚಿಸಿರುವ ಮತ್ತು ಕತ್ರಾವಣೆ ಮಾಡಿ ಲಾಟ್ ಮಾಡಿರುವ ನೀಲಗಿರಿ ಮರಗಳ ಲಾಗ್‌ಗಳನ್ನು ಪರಿಶೀಲಿಸಿ ಖಚಿತಪಡಿಸಿಕೊಂಡ ನಂತರ ಹರಾಜಿನಲ್ಲಿ ಭಾಗವಹಿಸಬೇಕು.
6) ಷೆಡ್ಯೂಲ್‌ನಲ್ಲಿ ತೋರಿಸಿರುವ ಪ್ರತಿ ಲಾಟ್‌ಗೆ ಪ್ರತ್ಯೇಕ ಹರಾಜು ಮಾಡಲಾಗುವುದು.
7) ಯಶಸ್ವಿ ಬಿಡ್‌ದಾರರು ತಮ್ಮ ಸ್ವಂತ ಖರ್ಚಿನಲ್ಲಿ ವಿಲೇವಾರಿ ಮಾಡಿಕೊಳ್ಳತಕ್ಕದ್ದು.
8) ಟಿಂಬರ್ ಲಾಗ್‌ಗಳನ್ನು ಸಾಗಿಸಲು ಪರವಾನಗಿಯನ್ನು ನೀಡಲಾಗುವುದು. ಪರವಾನಗಿ ಶುಲ್ಕವನ್ನು ಯಶಸ್ವಿ ಬಿಡ್‌ದಾರರು ವಲಯ ಅರಣ್ಯಾಧಿಕಾರಿ, (ಪ್ರಾದೇಶಿಕ) ಮಾಗಡಿ ರವರಲ್ಲಿ ಜಮಾ ಮಾಡತಕ್ಕದ್ದು.
9) ಹರಾಜಿನಲ್ಲಿ ಯಶಸ್ವಿಯಾದ ಬಿಡ್ಡುದಾರರು ಹರಾಜಿನ ದಿನದಂದೇ ತಾವು ಸೂಚಿಸಿದ ಹರಾಜಿನ ಮೊತ್ತದ ಶೇಕಡ 50 ರಷ್ಟು ಹಣವನ್ನು ಹಾಗೂ ಸೂಚಿಸಿದ ಮೊತ್ತಕ್ಕೆ ಅನ್ವಯಿಸುವ ಪೂರ್ತಿ ತೆರಿಗೆಯನ್ನು ಜಮಾ ಮಾಡತಕ್ಕದ್ದು. ತಪ್ಪಿದಲ್ಲಿ ಇ.ಎಂ.ಡಿ. ಮೊತ್ತವನ್ನು ಮುಟ್ಟುಗೋಲು ಹಾಕಿಕೊಂಡು 2ನೇ ಬಿಡ್ಡುದಾರು ಯಶಸ್ವಿ ಬಿಡ್ಡುದಾರರೆಂದು ಪರಿಗಣಿಸಲಾಗುವುದು.
10) ಬಿಡ್‌ದಾರರು ಈ ಕಚೇರಿಯಿಂದ ಹರಾಜು ಸ್ಥಿರೀಕರಣ ಆದೇಶ ಪಡೆದ 3 ದಿನಗಳೊಳಗಾಗಿ ಬಾಕಿ ಇರುವ ಬಿಡ್‌ನ ಮೊತ್ತದ ಶೇಕಡ 50 ರಷ್ಟು ಹಣವನ್ನು ಈ ಕಛೇರಿಗೆ ಪಾವತಿಸಿ ಟಿಂಬರ್ ಲಾಗ್‌ಗಳನ್ನು ತೆಗೆದುಕೊಂಡು ಹೋಗತಕ್ಕದ್ದು.
11) ಬಹಿರಂಗ ಹರಾಜಿನಲ್ಲಿ ಉದ್ಭವಿಸಬಹುದಾದ ತಂಟೆತಕರಾರುಗಳಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರುರವರು ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.
12) ಕಪ್ಪು ಪಟ್ಟಿಯಲ್ಲಿರುವ ಬಿಡ್‌ದಾರರು ಅಥವಾ ದಿವಾಳಿಯಾಗಿರುವವರು ಈ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುವುದಿಲ್ಲ.
13) ಹರಾಜಿನ ನಂತರ ಬರುವ ಬೆಲೆಗಳನ್ನು ಯಾವುದೇ ಕಾರಣಕ್ಕೂ ಪರಿಗಣಿಸಲಾಗುವುದಿಲ್ಲ.

14) ಯಾವುದೇ ತಂಟೆತಕರಾರುಗಳಿದ್ದಲ್ಲಿ ಹರಾಜು ಪ್ರಾರಂಭಿಸುವ ಎರಡು ಗಂಟೆ ಮುಂಚಿತವಾಗಿ ಸಂಬಂಧಿಸಿದ ಅಧಿಕಾರಿಗಳ ಗಮನಕ್ಕೆ ಲಿಖಿತ ಮೂಲಕ ತರತಕ್ಕದ್ದು ಹಾಗೂ ಹರಾಜಿನ ನಂತರ ತಡವಾಗಿ ಬರುವ ಯಾವುದೇ ತರಹದ ದೂರುಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.

15) ಯಶಸ್ವಿ ಬಿಡ್‌ದಾರರು ತಮ್ಮ ಬಿಡ್‌ನ ಬೆಲೆಯ ಮೇಲೆ ವ್ಯಾಟ್ ತೆರಿಗೆ 12.5%, ಅರಣ್ಯ ಅಭಿವೃದ್ಧಿ ತೆರಿಗೆ 12%, ಆದಾಯ ತೆರಿಗೆ 15%, ಮತ್ತು ಆದಾಯ ತೆರಿಗೆ ಮೇಲೆ ಸೆಸ್ 5% ರಷ್ಟು ಪಾವತಿಸಬೇಕು.

16) ಯಶಸ್ವಿ ಬಿಡ್‌ದಾರರು ನಿಗದಿತ ಅವಧಿಯಲ್ಲಿ ಟಿಂಬರ್ ಸಾಗಿಸದ ಪಕ್ಷದಲ್ಲಿ E.M.D. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ಬಿಡ್‌ದಾರರ ಜವಾಬ್ದಾರಿ ಮೇರೆಗೆ ಟಿಂಬರ್‌ನ್ನು ಮರು ಹರಾಜು ಮಾಡಲಾಗುವುದು. ಮರು ಹರಾಜಿನಲ್ಲಿ ಕಡಿಮೆ ಬಿಡ್ ಬಂದು ಸರ್ಕಾರಕ್ಕೆ ನಷ್ಟವಾದಲ್ಲಿ 1963ರ ಅರಣ್ಯ ಕಾಯ್ದೆ ಸೆಕ್ಷನ್ 109 ರಂತೆ ಬಾಕಿಯನ್ನು ಭೂಕಂದಾಯ ರೂಪದಲ್ಲಿ ವಸೂಲಿ ಮಾಡಲಾಗುವುದು ಅಥವಾ ಸರಕು ಸಾಮಗ್ರಿಗಳ ಮಾರಾಟದ ಕಾನೂನಿನನ್ವಯ ಅಥವಾ ಭಾರತೀಯ ದಂಡ ಸಂಹಿತೆ (Civil procedure) ಅನ್ವಯ ಕ್ರಮ ಕೈಗೊಳ್ಳಲಾಗುವುದು.

**ಎಸ್. ಶೇಖರ್,**
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು**

**ಷೆಡ್ಯೂಲ್**

| ಲಾಟು ಸಂಖ್ಯೆ | ವಿವರಗಳು ನೀಲಗಿರಿ ಟಿಂಬರ್/ಲಾಗ್‌ಗಳು | ಅಂದಾಜು ಪ್ರಮಾಣ ಘನಮೀಟರ್‌ನಲ್ಲಿ | ಮಾರಾಟದ ದಿನಾಂಕ | ಕಟ್ಟಬೇಕಾದ ಇಡಿಗಂಟು (EMD) ಪ್ರತಿ ಲಾಟ್‌ಗೆ |
|---|---|---|---|---|
| 1 | 8 ಲಾಗ್‌ಗಳು | 3.728 | 18.7.2006 | ರೂ.5,000-00 |
| 2 | 10 ಲಾಗ್‌ಗಳು | 4.502 | | |
| 3 | 10 ಲಾಗ್‌ಗಳು | 2.337 | | |
| 4 | 8 ಲಾಗ್‌ಗಳು | 2.847 | | |
| 5 | 7 ಲಾಗ್‌ಗಳು | 1.636 | | |
| 6 | 14 ಲಾಗ್‌ಗಳು | 4.027 | | |
| 7 | 15 ಲಾಗ್‌ಗಳು | 5.734 | | |
| 8 | 8 ಲಾಗ್‌ಗಳು | 1.415 | | |
| 9 | 15 ಲಾಗ್‌ಗಳು | 3.955 | | |
| 10 | 21 ಲಾಗ್‌ಗಳು | 5.465 | | |
| 11 | 10 ಲಾಗ್‌ಗಳು | 3.621 | | |
| 12 | 10 ಲಾಗ್‌ಗಳು | 4.986 | | |
| 13 | 5 ಲಾಗ್‌ಗಳು | 2.501 | | |
| 14 | 12 ಲಾಗ್‌ಗಳು | 5.067 | | |
| 15 | 14 ಲಾಗ್‌ಗಳು | 2.907 | | |
| 16 | 5 ಲಾಗ್‌ಗಳು | 1.297 | | |
| 17 | 6 ಲಾಗ್‌ಗಳು | 1.1282 | | |
| 18 | 11 ಲಾಗ್‌ಗಳು | 1.867 | | |
| 19 | 10 ಲಾಗ್‌ಗಳು | 2.597 | | |
| 20 | 9 ಲಾಗ್‌ಗಳು | 7.219 | | |
| 21 | 10 ಲಾಗ್‌ಗಳು | 5.356 | | |
| 22 | 8 ಲಾಗ್‌ಗಳು | 3.542 | | |
| 23 | 13 ಲಾಗ್‌ಗಳು | 4.324 | | |
| 24 | 14 ಲಾಗ್‌ಗಳು | 4.193 | | |
| 25 | 7 ಲಾಗ್‌ಗಳು | 4.313 | | |
| 26 | 6 ಲಾಗ್‌ಗಳು | 1.844 | | |
| 27 | 9 ಲಾಗ್‌ಗಳು | 3.331 | | |
| 28 | 7 ಲಾಗ್‌ಗಳು | 2.604 | | |
| 29 | 8 ಲಾಗ್‌ಗಳು | 4.021 | | |
| 30 | 6 ಲಾಗ್‌ಗಳು | 2.494 | | |
| 31 | 13 ಲಾಗ್‌ಗಳು | 3.522 | | |
| 32 | 14 ಲಾಗ್‌ಗಳು | 5.120 | | |
| 33 | 8 ಲಾಗ್‌ಗಳು | 32.920 | | |

| ಲಾಟು ಸಂಖ್ಯೆ | ವಿವರಗಳು ನೀಲಗಿರಿ ಟಿಂಬರ್/ಲಾಗ್‌ಗಳು | ಅಂದಾಜು ಪ್ರಮಾಣ ಘನಮೀಟರ್‌ನಲ್ಲಿ | ಮಾರಾಟದ ದಿನಾಂಕ | ಕಟ್ಟಬೇಕಾದ ಇಡಿಗಂಟು (EMD) ಪ್ರತಿ ಲಾಟ್‌ಗೆ |
|---|---|---|---|---|
| 34 | 8 ಲಾಗ್‌ಗಳು | 2.266 | | |
| 35 | 5 ಲಾಗ್‌ಗಳು | 1.883 | | |
| 36 | 13 ಲಾಗ್‌ಗಳು | 3.135 | | |
| 37 | 16 ಲಾಗ್‌ಗಳು | 5.076 | | |
| 38 | 9 ಲಾಗ್‌ಗಳು | 2.590 | | |
| 39 | 6 ಲಾಗ್‌ಗಳು | 2.5956 | | |
| 40 | 7 ಲಾಗ್‌ಗಳು | 3.168 | | |
| 41 | 6 ಲಾಗ್‌ಗಳು | 3.200 | | |
| 42 | 6 ಲಾಗ್‌ಗಳು | 2.065 | | |
| 43 | 9 ಲಾಗ್‌ಗಳು | 3.003 | | |
| 44 | 9 ಲಾಗ್‌ಗಳು | 2.907 | | |
| 45 | 5 ಲಾಗ್‌ಗಳು | 1.570 | | |
| 46 | 10 ಲಾಗ್‌ಗಳು | 3.343 | | |
| 47 | 2 ಲಾಗ್‌ಗಳು | 2.355 | | |
| 48 | 19 ಲಾಗ್‌ಗಳು | 9.763 | | |
| 49 | 7 ಲಾಗ್‌ಗಳು | 2.221 | | |
| 50 | 9 ಲಾಗ್‌ಗಳು | 5.411 | | |
| 51 | 6 ಲಾಗ್‌ಗಳು | 4.930 | | |
| 52 | 5 ಲಾಗ್‌ಗಳು | 4.193 | | |

**ಎಸ್. ಶೇಖರ್,**

ಪಿ.ಆರ್. 361

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು.

**DEPARTMENT OF EDUCATION**

**FORM I**

**(See Rule - 9)**

**D.D.P.I. OF SCE BIJAPUR**

**NOTIFICATION**

Shri/Smt **Paramu Ratnu Lamani,** working as Assistant Teacher in the Education Department of/office of H P.S GOTAKHANDAKI TQ: MUDDEBIHAL Dist Bijapur is permitted to change his/her name to **PRABHU RATNU NAYAK.**

P.D. 134 Deputy Director of Public Instruction, Bijapur.

**DEPARTMENT OF PUBLIC INSTRUCTION**

**Office of the Deputy Director of Public Instruction, Chikodi**

**FORM I**

**(See Rule - 9)**

**NOTIFICATION**

Shri **IRAPPA SABAPPA HARIJAN,** working as Assistant Teacher in Education Department of/office of **Shri SHAKAMBARI HIGH SCHOOL - VANDAL** is permitted to change his name to **IRAPPA SABAPPA SAGAR**.

P.D. 135 Department of Public Instruction, Bjapur.

**DEPARTMENT OF EDUCATION PUBLIC INSTRUCTION OFFICE OF THE DDPI**

**FORM I**

**(See Rule - 9)**

**NOTIFICATION**

Shri **Sharanappa Chandramappa Maratha,** working as teacher K.B.L.P.S Simehalli in the education department/of/office of education K.B.L.P.S Simehalli Tq:Basavnbagewadi permitted to change his/ name to Sharanappa Chandramappa Sinde.

P.D. 136 Deputy Director of Public Instruction, Chikodi.

## ಪೊಲೀಸ್ ಅಧೀಕ್ಷಕರ ಕಛೇರಿ, ಉಡುಪಿ ಜಿಲ್ಲೆ, ಉಡುಪಿ

### ಟೆಂಡರ್ ಕಂ ಬಹಿರಂಗ ಹರಾಜು

### ಸಂಖ್ಯೆ: ಎಸಿಟಿ-ಎ3/186/2006-07, ದಿನಾಂಕ: 19ನೇ ಜೂನ್ 2006

**ವಿಷಯ:** ನಿರುಪಯುಕ್ತಗೊಳಿಸಲಾಗಿರುವ ವಾಹನಗಳನ್ನು ಟೆಂಡರ್ ಕಂ ಬಹಿರಂಗ ಹರಾಜು ಮಾಡುವ ಕುರಿತು.

**ಉಲ್ಲೇಖ:** ಪೊಲೀಸು ಪ್ರಧಾನ ಕಛೇರಿ ಪತ್ರ ಸಂ. ವಾಸಾ (1) 11 / 2006-07 ದಿನಾಂಕ 30.5.2006.

ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಉಲ್ಲೇಖಿತ ಆದೇಶದಲ್ಲಿ ನಿರುಪಯುಕ್ತಗೊಳಿಸಲಾಗಿರುವ ಉಡುಪಿ ಜಿಲ್ಲಾ ಪೊಲೀಸ್‌ನ ಈ ಕೆಳಗಿನ ವಾಹನಗಳನ್ನು ದಿನಾಂಕ: 1.8.2006 ರಂದು ಬೆಳಗ್ಗೆ 11.00 ಗಂಟೆಗೆ ಉಡುಪಿ ಜಿಲ್ಲಾ ಸಶಸ್ತ್ರ ಮೀಸಲು ಪಡೆ ಕಛೇರಿಯ ಆವರಣದಲ್ಲಿ ಇರುವ ಸ್ಥಳದಲ್ಲಿ ಇರುವ ಸ್ಥಿತಿಯಲ್ಲಿಯೇ ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

| ಕ್ರ. ಸಂ. | ನೊಂದಣಿ ಸಂಖ್ಯೆ | ಉತ್ಪಾದಿತ ವರ್ಷ | ಉತ್ಪಾದಕರು | ವಾಹನ ವಿಧ | ಷರಾ (ಕಡತ) |
|---|---|---|---|---|---|
| 1. | ಸಿಎಜಿ 247 | 1981 | ಅಂಬಾಸಿಡರ್ | ಕಾರು | ಎ3/186/2005-06 |
| 2. | ಕೆಎ 19 ಜಿ 92 | 1994 | ಮಹಿಂದ್ರಾ | ಜೀ ಪು | ಎ3/187/2005-06 |
| 3. | ಕೆಎ 19 ಜಿ 60 | 1993 | ಮಹಿಂದ್ರಾ | ಜೀ ಪು | ಎ3/188/2005-06 |

ಮೇಲ್ಕಂಡ ವಾಹನಗಳನ್ನು ಸಾರ್ವಜನಿಕ ವೀಕ್ಷಣೆ / ಪರಿಶೀಲನೆಗಾಗಿ ಉಡುಪಿ ಜಿಲ್ಲಾ ಸಶಸ್ತ್ರ ಮೀಸಲು ಪಡೆ ಕಛೇರಿಯ ಆವರಣ, ಚಂದು ಮೈದಾನ, ಉಡುಪಿ ಇಲ್ಲಿ ನಿಲ್ಲಿಸಲಾಗಿದೆ.

ಟೆಂಡರು ಫಾರಂ, ನಿಬಂಧನೆ ಮತ್ತು ಷರತ್ತುಗಳ ವಿವರಗಳನ್ನು ಜಿಲ್ಲಾ ಪೊಲೀಸ್ ಕಛೇರಿ, ಉಡುಪಿ ಜಿಲ್ಲೆ, ಉಡುಪಿಯಿಂದ ಪಡೆಯಬಹುದು.

ಭರ್ತಿ ಮಾಡಿದ ಟೆಂಡರು ಫಾರಂಗಳನ್ನು ದಿನಾಂಕ 31.7.2006 ರಂದು 5.00 ಗಂಟೆಯ ಒಳಗಾಗಿ ಜಿಲ್ಲಾ ಪೊಲೀಸ್ ಕಛೇರಿ, ಉಡುಪಿ ಜಿಲ್ಲೆ, ಉಡುಪಿ ಇವರಿಗೆ ತಲುಪುವಂತೆ ಸಲ್ಲಿಸಲು ಸೂಚಿಸಲಾಗಿದೆ.

### ನಿಬಂಧನೆ ಮತ್ತು ಷರತ್ತುಗಳು

1. ಟೆಂಡರು ಫಾರಂಗಳನ್ನು ಪ್ರತಿ ಒಂದು ವಾಹನಕ್ಕೂ ಪ್ರತ್ಯೇಕವಾಗಿ ದ್ವಿಪ್ರತಿಯಲ್ಲಿ ವಾಹನ ಸಂಖ್ಯೆ ಹಾಗೂ ಬೆಲೆಗಳನ್ನು ಸ್ಪಷ್ಟವಾಗಿ ನಮೂದಿಸಿ, ಅರ್ನೆಸ್ಟ್ ಮನಿ ರೂ. 500/- ರ ಡಿಡಿಯನ್ನು (ಪೊಲೀಸ್ ಅಧೀಕ್ಷಕರು, ಉಡುಪಿ ಜಿಲ್ಲೆ, ಉಡುಪಿ ರವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳಿಂದ ಪಡೆದು) ಒಂದು ಲಕೋಟೆಯಲ್ಲಿಟ್ಟು ಮೊಹರು ಮಾಡಿರಬೇಕು. ಲಕೋಟೆಯ ಮೇಲೆ ಮೋಟಾರು ವಾಹನ ಖರೀದಿಸುವುದಕ್ಕಾಗಿ ಟೆಂಡರು ಎಂದು ನಮೂದಿಸಿ ಪೊಲೀಸ್ ಅಧೀಕ್ಷಕರು, ಉಡುಪಿ ಜಿಲ್ಲೆ, ಉಡುಪಿ ರವರಿಗೆ ದಿನಾಂಕ 31.7.2006ರ ಸಂಜೆ 5.00 ಗಂಟೆಯ ಒಳಗಾಗಿ ತಲುಪುವಂತೆ ಸಲ್ಲಿಸಬೇಕು.
2. ಟೆಂಡರ್ ಫಾರಂಗಳನ್ನು ವರ್ಗಾಯಿಸಬಾರದು, ಅರ್ನೆಸ್ಟ್ ಮನಿ ಇಲ್ಲದೆ ಸಲ್ಲಿಸಲಾದ ಟೆಂಡರ್ ಫಾರಂಗಳನ್ನು ತಿರಸ್ಕರಿಸಲಾಗುವುದು ಹಾಗೂ ಟೆಂಡರ್ ಫಾರಂಗಳೊಂದಿಗೆ ಸಲ್ಲಿಸಲಾದ ಅರ್ನೆಸ್ಟ್ ಮನಿಗೆ ಬಡ್ಡಿಯನ್ನು ನೀಡುವುದಿಲ್ಲ.
3. ಸಾರ್ವಜನಿಕರು ಹರಾಜಿನಲ್ಲಿ ಭಾಗವಹಿಸಲು ಈ ಮೇಲೆ ಹೇಳಲಾದ ದಿನಾಂಕದಂದು ಬೆಳಗ್ಗೆ 10.30 ಗಂಟೆಯ ಒಳಗಾಗಿ ರೂ.500/-ಗಳ ನಗದು ಠೇವಣಿಯನ್ನು ಪಾವತಿ ಮಾಡಿ ಹರಾಜಿನಲ್ಲಿ ಭಾಗವಹಿಸಬಹುದು. ಅರ್ನೆಸ್ಟ್ ಮನಿಯೊಂದಿಗೆ ಟೆಂಡರು ಸಲ್ಲಿಸಲಾದವರು ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು. ಹರಾಜಿನಲ್ಲಿ ಯಶಸ್ವಿಯಾಗದವರಿಗೆ ಠೇವಣಿಯನ್ನು ಕೂಡಲೆ ಹಿಂದಿರುಗಿಸಲಾಗುವುದು.
4. ಟೆಂಡರು ಫಾರಂಗಳಲ್ಲಿ ಯಾವುದೇ ತಿದ್ದುಪಡಿ ಇದ್ದಲ್ಲಿ ಅದನ್ನು ಪೂರ್ಣ ಸಹಿಯೊಂದಿಗೆ ದೃಢೀಕರಿಸತಕ್ಕದ್ದು.
5. ಪೊಲೀಸು ಅಧೀಕ್ಷಕರು, ಉಡುಪಿ ಜಿಲ್ಲೆ, ಉಡುಪಿಯವರ ಮೇಲು ಉಸ್ತುವಾರಿಯಲ್ಲಿ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಹರಾಜನ್ನು ನಡೆಸುವರು, ಹರಾಜಿನ ನಂತರ ಮೊಹರಾದ ಟೆಂಡರುಗಳನ್ನು ಬಿಡ್‌ದಾರರ ಅಥವಾ ಅವರ ಏಜೆಂಟರ ಸಮ್ಮುಖದಲ್ಲಿ ಅದೇ ದಿನದಂದು ತೆರೆಯುವರು. ಹರಾಜಿನಲ್ಲಿ ಅಥವಾ ಟೆಂಡರ್ ಇವುಗಳಲ್ಲಿ ಯಾವುದರಲ್ಲಿ ಹೆಚ್ಚಿನ ಮೊತ್ತ ದೊರಕುವುದೊ ಅದನ್ನು ಪರಿಗಣಿಸಲಾಗುವುದು.
6. ಹರಾಜಿನಲ್ಲಿ ಯಶಸ್ವಿಯಾದವರು ಒಟ್ಟು ಮೊತ್ತದಲ್ಲಿ ಶೇ. 25 ರಷ್ಟನ್ನು ಕೂಡಲೇ ಪೊಲೀಸ್ ಅಧೀಕ್ಷಕರ ಕಛೇರಿಯ ನಗದು ಶಾಖೆಗೆ ಪಾವತಿಸುವುದು. ದೃಢಪತ್ರ ತಲುಪಿದ 8 (ಎಂಟು) ದಿನಗಳೊಳಗಾಗಿ ಬಾಕಿ ಮೊತ್ತ ಶೇ.75ನ್ನು ಮತ್ತು ತೆರಿಗೆ (ತೆರಿಗೆ ಮೊತ್ತವನ್ನು ಮಾರಾಟ ದಿನದಂದು ಅನ್ವಯಿಸುವಂತೆ ಪ್ರತ್ಯೇಕವಾಗಿ ವಿಧಿಸಲಾಗುವುದು) ಹಣವನ್ನು ನಗದಾಗಿ ಜಿಲ್ಲಾ ಪೊಲೀಸ್ ಕಛೇರಿಯಲ್ಲಿ ಪಾವತಿ ಮಾಡುವುದು ಮತ್ತು ವಾಹನವನ್ನು ಸ್ವಂತ ವೆಚ್ಚದಿಂದ ತೆಗೆದುಕೊಂಡು ಹೋಗುವುದು.
7. ಅರ್ನೆಸ್ಟ್ ಮನಿಯನ್ನು ಶೇ.75ರ ಮೊತ್ತಕ್ಕೆ ಹೊಂದಾಣಿಕೆ ಮಾಡಲಾಗುವುದಿಲ್ಲ. ಯಶಸ್ವಿದಾರರು ಎಲ್ಲಾ ನಿಬಂಧನೆ ಹಾಗೂ ಷರತ್ತುಗಳನ್ನು ಪೂರ್ಣಗೊಳಿಸಿ ವಾಹನವನ್ನು ತಮ್ಮ ವಶಕ್ಕೆ ಪಡೆದ ನಂತರ ಈ ಮೊತ್ತವನ್ನು ಕಛೇರಿಯ ಲೆಕ್ಕ ಶಾಖೆಯಿಂದ ವಾಪಾಸು ನೀಡಲಾಗುವುದು.
8. ಯಶಸ್ವಿದಾರರು ನಿಗದಿತ ಅವಧಿಯಲ್ಲಿ ಹಣವನ್ನು ಪಾವತಿ ಮಾಡದಿದ್ದಲ್ಲಿ ಅಥವಾ ಈ ಇಲಾಖೆಗೆ ಯಾವುದೇ ರೀತಿಯ ನಷ್ಟ ಉಂಟುಮಾಡಿದಲ್ಲಿ ನಷ್ಟದ ಮೊತ್ತವನ್ನು ಇಎಂಡಿ ಹಾಗೂ ಶೇ.25 ಪಾವತಿಸಲಾದ ಮೊತ್ತದಲ್ಲಿ ವಸೂಲಿ ಮಾಡಲಾಗುವುದು ಅಥವಾ ಡಿಪಾಸಿಟ್ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಕಾನೂನಿನ ಕ್ರಮ ಜರುಗಿಸಲಾಗುವುದು.
9. ಪೊಲೀಸು ಅಧೀಕ್ಷಕರು, ಉಡುಪಿ ಜಿಲ್ಲೆ, ಉಡುಪಿ ರವರು ಯಾವುದೇ ಕಾರಣವನ್ನು ನೀಡದೇ ಟೆಂಡರು ಕಂ ಹರಾಜನ್ನು ಮುಂದೂಡುವ ಅಥವಾ ರದ್ದುಪಡಿಸುವ ಹಕ್ಕನ್ನು ಹೊಂದಿರುತ್ತಾರೆ.

10. ಈ ಮೋಟಾರು ವಾಹನದ ಮಾರಾಟದ ಒಪ್ಪಂದದಲ್ಲಿ ಯಾವುದೇ ವಿವಾದ ಉಂಟಾದಲ್ಲಿ ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ರಾಜ್ಯ, ಬೆಂಗಳೂರು ರವರ ನಿರ್ಣಯ ಅಂತಿಮವಾಗಿದೆ.
11. ಈ ಸಂಬಂಧದಲ್ಲಿ ಹೆಚ್ಚಿನ ಮಾಹಿತಿಯನ್ನು ಪೊಲೀಸ್ ಅಧೀಕ್ಷಕರು, ಉಡುಪಿ ಜಿಲ್ಲೆ, ಉಡುಪಿರವರ ಕಛೇರಿಯಿಂದ ಪಡೆಯಬಹುದಾಗಿದೆ.

ಪೊಲೀಸ್ ಅಧೀಕ್ಷಕರು,
ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್. 350

## ನೋಂದಣಿ ಮತ್ತು ಮುದ್ರಾಂಕ ಇಲಾಖೆ
## ನೇಮಕಾತಿ ಆದೇಶ
### ಜಿಲ್ಲಾ ನೋಂದಣಾಧಿಕಾರಿಗಳು, ಬೀದರ್ ಇವರ ನಡವಳಿಗಳು

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೀದರ್ ಜಿಲ್ಲೆಯಲ್ಲಿ ದ್ವಿತಿಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತಿಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ

**ಉಲ್ಲೇಖ:**
1) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ: ಸಿಬ್ಬಂದಿ:ಸಿಆರ್:2001-2002 (fax) ದಿನಾಂಕ:11.01.2002
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001, ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
3) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: EST-1-273/2001-02, ದಿನಾಂಕ: 01.08.2002 (ದಿನಾಂಕ: 08.08.2002ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ).
4) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಂತಿಮ ಆಯ್ಕೆ ಪಟ್ಟಿ ಸಂಖ್ಯೆ: EST-1-273/2001-02, ದಿನಾಂಕ: 23.11.2004.
5) ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ:ಜಿನೋಬಿ:ಸಿಬ್ಬಂದಿ:2004-05:264 ದಿನಾಂಕ:29.12.2004
6) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST-1-273/2001-02, ದಿನಾಂಕ: 06.04.2006.

**ಪ್ರಸ್ತಾವನೆ:**

ಈ ಇಲಾಖೆಯ ಬೀದರ್ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1 | ಬೀದರ್ ಜಿಲ್ಲೆ | ಒಂದು | ಒಂದು | ಎರಡು |

ಈ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು Merit ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಉಲ್ಲೇಖ (4) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಉಲ್ಲೇಖ 6ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಸದರಿ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಮೇಲ್ಕಂಡಂತೆ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಜಿನೋಬಿ:ಸಿಬ್ಬಂದಿ:2004-2005/196, ದಿನಾಂಕ: 19ನೇ ಜೂನ್ 2006**

ಉಲ್ಲೇಖ (5) ರ ಈ ಕಛೇರಿಯ ನೇಮಕಾತಿ ಆದೇಶವನ್ನು ಮುಂದುವರಿಸುತ್ತಾ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ 2ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ 6 ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡುಬಂದ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ:3000-75-3450-100-4450-125-5450 ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತಿಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತಿಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ ST | ಜನ್ಮ ದಿನಾಂಕ | 7.9.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾ ವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿ ಗೊಳಿಸಿದ ಕಛೇರಿಯ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಸರೋಜನಿ ಯಮನಪ್ಪ ಕಾಮರೆಡ್ಡಿ ತಂದೆ ಯಮನಪ್ಪ ಫಿರಪ್ಪ ಕಾಮರೆಡ್ಡಿ C/o ವೆಂಕಟೇಶ ಲೋಕಪೂರ ಪ್ರಧಾನ ಅಂಚೆ ಕಛೇರಿ ಹಿಂದೆ ರೈಲ್ವೆ ಸ್ಟೇಷನ್ ರೋಡ್ ತಾ:ಜಿ: ಬಾಗಲಕೋಟೆ-587101 | ST | 20.7.72 | 30.1.17 | S.S.L.C. 66,833 | ಉಪ ನೋಂದಣಿ ಕಛೇರಿ ಬೀದರ್ ಬೀದರ್ ಜಿಲ್ಲೆ | ಪರಿಶಿಷ್ಟ ಪಂಗಡ ಮಹಿಳಾ ಅಭ್ಯರ್ಥಿ ಮುಖ್ಯ ಪಟ್ಟಿ |

S.S.L.C. ಅಂಕಪಟ್ಟಿಯ ನೋಂದಣಿ ಸಂಖ್ಯೆ: 141118 ಮಾರ್ಚ್ 1988 (ವರ್ಷ) ರ ಪ್ರಕಾರ ಸರೋಜಿನಿ ಯಮನಪ್ಪಾ ಕಾಮರೆಡ್ಡಿ ಇವರ ಜನ್ಮ ದಿನಾಂಕವು 20.7.1972 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿ ಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಾವಳಿ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರು ಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ರಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರು ಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರ್ ಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್ (ಸಿ.ಸಿ.ಎ.) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 (ಶ್ರೀ ಬಿ.ಎಲ್. ನಾರಾಯಣ - VS - ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು

ಹೊಂದಿರತಕ್ಕದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232:99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-3 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.

15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದು ಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದು ಪಡಿಸಲಾಗುವುದು.
18. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
19. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
23. ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
24. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ಯಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,
ಬೀದರ್ ಜಿಲ್ಲೆ, ಬೀದರ್.

ಪಿ.ಆರ್. 351

## ತೋಟಗಾರಿಕೆ ಇಲಾಖೆ

### ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, ರಾಜ್ಯ ವಲಯ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್ ಉದ್ಯಾನವನ, ಬೆಂಗಳೂರು

**ಸಂ:ಹಿಸತೋನಿ:ರಾವ:ಬೆಂಗ್ರಾ:ತಾಂಸ:14:06-07/268, ದಿನಾಂಕ: 22ನೇ ಜೂನ್ 2006**

**ಸೀಬೆ ಫಸಲಿನ ವಿಲೇವಾರಿಗೆ ಟೆಂಡರ್-ಕಂ-ಹರಾಜು ಪ್ರಕಟಣೆ**

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್ ಉದ್ಯಾನವನ, ಬೆಂಗಳೂರು-1 ರವರ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ಕ್ಷೇತ್ರಗಳ ಸೀಬೆ ಫಸಲನ್ನು 2006ನೇ ಸಾಲಿನ 2ನೇ ಅವಧಿಗೆ ವಿಲೇವಾರಿ ಮಾಡಲು ಇಲಾಖೆಯ ಪರಿಷ್ಕೃತ ನಿಯಮಾವಳಿಗಳ ಪ್ರಕಾರ ಟೆಂಡರ್-ಕಂ-ಹರಾಜು ಪ್ರಕಟಣೆ ಹೊರಡಿಸಿದೆ. ಟೆಂಡರ್-ಕಂ-ಹರಾಜು ಪ್ರಕ್ರಿಯೆಯನ್ನು ಈ ಕೆಳಗಿನಂತೆ ತಿಳಿಸಿರುವ ದಿನಾಂಕ ಮತ್ತು ವೇಳೆಯಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ರಾಜ್ಯ ವಲಯ, ಕಬ್ಬನ್ ಪಾರ್ಕ್, ಬೆಂಗಳೂರು ರವರ ಕಛೇರಿಯಲ್ಲಿ ನಡೆಸಲಾಗುವುದು ಆಸಕ್ತಿಯುಳ್ಳ ಸಾರ್ವಜನಿಕರು ಮತ್ತು ವ್ಯಾಪಾರಸ್ತರು ಕ್ಷೇತ್ರದಲ್ಲಿರುವ ಫಸಲು ವೀಕ್ಷಿಸಿ ನಂತರ ಸದರಿ ಪ್ರಕ್ರಿಯೆಯಲ್ಲಿ ಭಾಗವಹಿಸಲು ಕೋರಲಾಗಿದೆ.

| ಕ್ರ. ಸಂ. | ತೋಗಾರಿಕೆ ಕ್ಷೇತ್ರದ ಹೆಸರು | ಫಸಲು | ಫಸಲನ್ನು ರೂಢಿಸಿ ಕೊಳ್ಳುವ ಕೊನೆಯ ದಿನಾಂಕ | ಠೇವಣಿ ಮೊತ್ತ | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್-ಕಂ-ಹರಾಜು ನಡೆಸುವ ದಿನಾಂಕ ಮತ್ತು ವೇಳೆ |
|---|---|---|---|---|---|---|
| 1 | ತಿಪ್ಪಗೊಂಡನಹಳ್ಳಿ ಕ್ಷೇತ್ರ, ನೆಲಮಂಗಲ ತಾಲ್ಲೂಕು | ಸೀಬೆ | 31.12.2006 | 2000 | 20.7.06 12.00 ಗಂಟೆಗೆ | 20.7.06 12.30 ಗಂಟೆಗೆ |
| 2 | ಬಗಿನಗೆರೆ ಕಾವಲ್ ತೋಟಗಾರಿಕೆ ಕ್ಷೇತ್ರ ಮಾಗಡಿ ತಾಲ್ಲೂಕು | ಸೀಬೆ | 31.12.2006 | 2000 | 21.7.06 12.00 ಗಂಟೆಗೆ | 21.7.06 12.30 ಗಂಟೆಗೆ |

ಟೆಂಡರ್ ಫಾರಂಗಳನ್ನು ರೂ.25.00 ಪಾವತಿ ಮಾಡಿ ಈ ಕಛೇರಿ ಅಥವಾ ಆಯಾಯಾ ಕ್ಷೇತ್ರಗಳಲ್ಲಿ ಪಡೆಯಬಹುದು. ಟೆಂಡರ್‌ದಾರರು ಫಸಲಿಗೆ ನಿಗದಿಪಡಿಸಿದ ಠೇವಣಿ ಮೊತ್ತ ಮತ್ತು ಫಸಲಿಗೆ ತಾವು ನಮೂದಿಸುವ ಟೆಂಡರ್ ಮೊತ್ತದ ಶೇಕಡ 50 ಭಾಗದ ಮೊತ್ತವನ್ನು ಪ್ರತ್ಯೇಕವಾಗಿ ಅಡ್ಡಗೆರೆ ಎಳೆದ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ಗ್ರಾಮಾಂತರ ಜಿಲ್ಲೆ, ಕಬ್ಬನ್ ಪಾರ್ಕ್, ಬೆಂಗಳೂರು-1 ಹೆಸರಿನಲ್ಲಿ ಪಡೆದು ಟೆಂಡರ್ ಜೊತೆ ಕಡ್ಡಾಯವಾಗಿ ಲಗತ್ತಿಸಬೇಕು. ಟೆಂಡರ್ ಫಾರಂನಲ್ಲಿ ಟೆಂಡರ್‌ದಾರರು ತಾವು ದಾಖಲಿಸುವ ಮೊತ್ತವನ್ನು ಕಡ್ಡಾಯವಾಗಿ ನಮೂದಿಸಿ ತಮ್ಮ ಹೆಸರು ವಿಳಾಸಗಳನ್ನು ಭರ್ತಿ ಮಾಡಿ ಸಹಿ ಮಾಡಿರಬೇಕು. ಇಲ್ಲದಿದ್ದರೆ ಅಪೂರ್ವ ಟೆಂಡರ್ ಎಂದು ಪರಿಗಣಿಸಿ ತಿರಸ್ಕರಿಸಲಾಗುವುದು. ಟೆಂಡರ್‌ದಾರರು ಭರ್ತಿ ಮಾಡಿ ಮೊಹರಾದ ಟೆಂಡರ್ ಫಾರಂಗಳನ್ನು ನಿಗದಿಪಡಿಸಿದ ದಿನಾಂಕ ಮತ್ತು ವೇಳೆಗೆ ಅಥವಾ ಅದಕ್ಕೂ ಮೊದಲು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ಗ್ರಾಮಾಂತರ ಜಿಲ್ಲೆ, ಕಬ್ಬನ್ ಪಾರ್ಕ್, ಕಛೇರಿಯಲ್ಲೇ ಸಲ್ಲಿಸಬೇಕು.

ಬಹಿರಂಗ ಹರಾಜಿನಲ್ಲಿ ಬಿಡ್ಡು ಮಾಡುವವರು ಸಹ ನಿಗದಿಪಡಿಸಿದ ಠೇವಣಿ ಹಣವನ್ನು ಪ್ರತ್ಯೇಕವಾಗಿ ಡಿ.ಡಿ. ರೂಪದಲ್ಲಿ ಸಲ್ಲಿಸಿ ಬಿಡ್ಡು ಮಾಡಲು ಅರ್ಹತೆಯನ್ನು ಪಡೆಯಬೇಕು. ಟೆಂಡರ್ ಹಾಗೂ ಹರಾಜು ಬಿಡ್ಡಿನ ಮೊತ್ತಗಳಲ್ಲಿ ಅತೀ ಹೆಚ್ಚಿನ ಮೊತ್ತವಾದ ಒಂದನ್ನು ಮಾತ್ರ ಪರಿಗಣಿಸಲಾಗುವುದು. ಅತೀ ಹೆಚ್ಚಿನ ಹರಾಜು ಮೊತ್ತದ ಬಿಡ್ಡುದಾರರು ಸಹ ಬಿಡಿನ ಮೊತ್ತದ ಶೇಕಡ 50 ಭಾಗ ಮೊತ್ತವನ್ನು ಸ್ಥಳದಲ್ಲಿಯೇ ಡಿ.ಡಿ. ರೂಪದಲ್ಲಿ ಪಾವತಿ ಮಾಡಬೇಕು.

ಮೇಲಿನ ತೋಟಗಾರಿಕೆ ಕ್ಷೇತ್ರಗಳ ಫಸಲನ್ನು ಅನುಮೋದನೆಯಾದ ದಿನಾಂಕದಿಂದ 10 ದಿನಗಳೊಗಾಗಿ ಪೂರ್ಣ ಮೊಬಲಗನ್ನು ಪಾತಿಸಿ ಫಸಲನ್ನು ರೂಢಿಸಿಕೊಳ್ಳಬಹುದು. ಟೆಂಡರ್-ಕಂ-ಹರಾಜನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ತೋಗಾರಿಕೆ ನಿರ್ದೇಶಕರು ಪಡೆದಿರುತ್ತಾರೆ. ಇಲಾಖಾ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ. ಹೆಚ್ಚಿನ ಪರಿಷ್ಕೃತ ನಿಯಮಾವಳಿ ವಿವರಗಳನ್ನು ನಿಬಂಧನೆ, ಷರತ್ತುಗಳನ್ನು ಈ ಕಛೇರಿಯಲ್ಲಿ ಅಥವಾ ಸಂಬಂಧಪಟ್ಟ ಕ್ಷೇತ್ರಗಳಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು
(ರಾಜ್ಯಲಯ) ಬೆಂಗಳೂರು (ಗ್ರಾ) ಜಿಲ್ಲೆ.

ಪಿ.ಆರ್. 354

## ಪೊಲೀಸ್ ಸೂಪರಿಂಟೆಂಡೆಂಟ್‌ರವರ ಕಚೇರಿ, ಬಳ್ಳಾರಿ

### ಅಧಿಸೂಚನೆ

**ಸಂಖ್ಯೆ:133/ಲೆಕ್ಕ-7/ಪಿಎಂಟಿ/2006-07, ದಿನಾಂಕ: 22ನೇ ಜೂನ್ 2006**

**ವಿಷಯ:** ಬಳ್ಳಾರಿ ಜಿಲ್ಲೆಯ ಪೊಲೀಸ್ ಇಲಾಖೆಯ 2005-06ನೇ ಸಾಲಿನ ನಿರುಪಯುಕ್ತ ಬಿಡಿ ಭಾಗಗಳ, ಟಯರ್, ಟ್ಯೂಬ್, ಹಾಗೂ ಯಂತ್ರದ ಎಣ್ಣೆಯನ್ನು ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರ ಆದೇಶ ಸಂಖ್ಯೆ: ಹೆಚ್ ಡಿ/198/ಇಎಂವಿ/ 2000/ ದಿನಾಂಕ:19.09.2003.

2. ಡಿ.ಜಿ. ಮತ್ತು ಐ.ಜಿ.ಪಿ. ಕರ್ನಾಟಕ ರಾಜ್ಯ, ಬೆಂಗಳೂರು ರವರ ಪತ್ರ ಸಂ:ವಾಸಾ(3) 1/97-98,ದಿನಾಂಕ:4.3.2004.

ಸಾರ್ವಜನಿಕರ ಮಾಹಿತಿಗಾಗಿ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಬಳ್ಳಾರಿಯ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕಾರ್ಯಾಲಯದ ಮುಂಭಾಗದಲ್ಲಿ ಯಥಾಸ್ಥಿತಿಯಲ್ಲಿರುವ ಈ ಕೆಳಕಂಡ ಪೊಲೀಸ್ ವಾಹನಗಳ ನಿರುಪಯುಕ್ತ ಬಿಡಿಭಾಗಗಳು, ಟಯರ್,ಟ್ಯೂಬ್ ಹಾಗೂ ಯಂತ್ರದ ಎಣ್ಣೆಯ 2005-2006ನೇ ಸಾಲಿನ ಟೆಂಡರ್ ಕಂ ಹರಾಜು (ಟೆಂಡರ್ ಕಂ ಆಕ್ಷನ್) ಮೂಲಕ ಬಳ್ಳಾರಿ ಜಿಲ್ಲಾ ಸಶಸ್ತ್ರ ಮಿಸಲು ಪಡೆ ಕಚೇರಿಯ ಆವರಣದಲ್ಲಿ ದಿನಾಂಕ:5.8.2006 ರಂದು ಬೆಳಿಗ್ಗೆ 11.00 ಗಂಟೆಗೆ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಆಸಕ್ತಿಯುಳ್ಳವರು ಭಾಗವಹಿಸಬಹುದು. ನಿರುಪಯುಕ್ತ ಬಿಡಿಭಾಗಗಳು, ಟಯರ್, ಟ್ಯೂಬ್ ಹಾಗೂ ಯಂತ್ರಗಳ ಎಣ್ಣೆಯ ವಿವರ ಈ ಕೆಳಗಿನಂತೆ ಇರುತ್ತದೆ.

**2005-2006**

| ಕ್ರ. ಸಂ. | ವಿವರಣೆ | ಗಾತ್ರ |
|---|---|---|
| 1. | ಟಯರ್ ಟ್ಯೂಬ್ ಅಳತೆ 165/ 80 R 15 | 15 + 15 |
| 2. | ಟಯರು ಟ್ಯೂಬ್ ಅಳತೆ 195/ 80 R 15 | 25 + 25 |
| 3. | ಟಯರು ಟ್ಯೂಬ್ ಅಳತೆ ಎಫ್ 78-15 | 10 + 10 |
| 4. | ಟಯರು ಟ್ಯೂಬ್ ಅಳತೆ 600-16 | 5 |
| 5. | ನಿರುಪಯುಕ್ತ ಯಂತ್ರದ ಎಣ್ಣೆ | 443 |
| 6. | ವಾಹನಗಳ ನಿಷ್ಪ್ರಯೋಜಕ ಬಿಡಿಭಾಗಗಳು ಅಂದಾಜು 250 ಕೆ.ಜಿ. | |

**ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1) ಈ ನಿರುಪಯುಕ್ತ ಬಿಡಿಭಾಗಗಳು ಟಯರ್, ಟ್ಯೂಬ್ ಹಾಗೂ ಯಂತ್ರದ ಎಣ್ಣೆ ಜಿಲ್ಲಾ ಕೇಂದ್ರ ಕಾರ್ಯಾಗಾರದ ಆವರಣದಲ್ಲಿ ಇರುತ್ತವೆ. ಅವುಗಳನ್ನು ಹಾಲಿ ಯಾವ ಸ್ಥಿತಿಯಲ್ಲಿರುತ್ತವೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು.
2) ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಪ್ರತಿಯೊಬ್ಬರು ರೂ. 2,000-00 (ಎರಡು ಸಾವಿರ ರೂಪಾಯಿಗಳು) ಠೇವಣಿ ಪಾವತಿಸದವರು ಹರಾಜಿನಲ್ಲಿ ಭಾಗವಹಿಸುವಂತಿಲ್ಲ.
3) ಟೆಂಡರುಗಳನ್ನು ಸಲ್ಲಿಸಬಯಸುವ ಸಾರ್ವಜನಿಕರು ಮೊಹರು ಮಾಡಿದ ಟೆಂಡರ್ (ಸೀಲ್ಡ್) ಲಕೋಟೆಗಳನ್ನು ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ ಇವರ ವಿಳಾಸಕ್ಕೆ ಲಕೋಟೆಯ ಮೇಲೆ **ನಿರುಪಯುಕ್ತ ಬಿಡಿ ಭಾಗಗಳು, ಟಯರ್, ಟ್ಯೂಬ್‌ಗಳಿಗಾಗಿ** ಎಂದು ಸ್ಪಷ್ಟವಾಗಿ ನಮೂದಿಸಿ ಖುದ್ದಾಗಿ ಇಲ್ಲವೆ ಅಂಚೆ ಮೂಲಕ ದಿನಾಂಕ:28.07.2006ರ ಸಂಜೆ 4-00 ಗಂಟೆ ಒಳಗಾಗಿ ಈ ಕಚೇರಿಗೆ ತಲುಪುವಂತೆ ಸಲ್ಲಿಸತಕ್ಕದ್ದು.
4) ಟೆಂಡರ್ ಫಾರಂನಲ್ಲಿ ಬಿಡ್ ಮೊತ್ತವನ್ನು ಅಂಕಿ ಮತ್ತು ಅಕ್ಷರ ಎರಡರಲ್ಲಿಯೂ ಸ್ಪಷ್ಟವಾಗಿ ನಮೂದಿಸಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರು ತಮ್ಮ ಪೂರ್ಣ ಸಹಿ ಮಾಡಿ ತಿದ್ದುಪಡಿಯನ್ನು ದೃಢೀಕರಿಸಬೇಕು.
5) ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗದು.

6) ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆ ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಗಳನ್ನು ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ ಅವರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯಾಗಲೀ ಸಾರ್ವಜನಿಕರ ಸಮ್ಮುಖದಲ್ಲಿ ಕರೆದು ಬಹಿರಂಗಪಡಿಸುವುದು. ಹರಾಜಿನಲ್ಲಿ ದಾಖಲಾದ ಅತೀ ಹೆಚ್ಚಿನ ಬೆಲೆ ಅಥವಾ ಟೆಂಡರ್‌ನಲ್ಲಿ ದಾಖಲಿಸಿದ ಅತೀ ಹೆಚ್ಚಿನ ಬೆಲೆ ಇವೆರಡರಲ್ಲಿ ಅತೀ ಹೆಚ್ಚಿನ ದರ ದಾಖಲಿಸಿದವರನ್ನು ಯಶಸ್ವಿ ಟೆಂಡರ್/ ಬಿಡ್‌ದಾರರೆಂದು ಪರಿಗಣಿಸಲಾಗುವುದು.

7) ಯಶಸ್ವಿಯಾದ ಟೆಂಡರ್/ ಬಿಡ್‌ದಾರರು ಅಂಗೀಕೃತ ಹೆಚ್ಚಿನ ಬೆಲೆಯ ಶೇಕಡ 25 ರಷ್ಟು (ಠೇವಣಿ ಬಿಟ್ಟು) ಹಣವನ್ನು ಹರಾಜಿನ ಸ್ಥಳದಲ್ಲಿ ದಿನವೇ ತುಂಬತಕ್ಕದ್ದು. ಈ ಹಣಕ್ಕೆ ಯಾವುದೇ ಬಡ್ಡಿ ನೀಡಲಾಗದು. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರಿಂದ ವಿಲೇವಾರಿಗೆ ಒಪ್ಪಿಗೆ ಬಂದ ನಂತರವೇ ಉಳಿದ ಹಣವನ್ನು ಬಿಡ್‌ದಾರರಿಂದ ಕಟ್ಟಿಸಿಕೊಂಡು ಬಿಡಿಭಾಗಗಳು,ಟಯರ್, ಟ್ಯೂಬ್‌ಗಳನ್ನು ವಹಿಸಿಕೊಡಲಾಗುವುದು. ಈ ಬಿಡಿಭಾಗಗಳು, ಟಯರ್, ಟ್ಯೂಬ್‌ಗಳನ್ನು ಯಶಸ್ವಿ ಬಿಡ್‌ದಾರರು ತಮ್ಮ ಸ್ವಂತ ಖರ್ಚಿನಲ್ಲಿ ತೆಗೆದುಕೊಂಡು ಹೋಗುವುದು. ತಪ್ಪಿದಲ್ಲಿ ಅವರು ತುಂಬಿದ ಶೇಕಡಾ 25 ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆಯನ್ನು ಹೊರಡಿಸಿ ಬಿಡಿಭಾಗಗಳು, ಟಯರ್ ಟ್ಯೂಬ್‌ಗಳನ್ನು ಮರು ಹರಾಜು ಮಾಡಲಾಗುವುದು.

8) ಎಲ್ಲಾ ಹಣವನ್ನು ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರ ಕಚೇರಿಯ ನಗದು ಶಾಖೆಯಲ್ಲಿ ನಗದಾಗಿಯೇ ತುಂಬಬೇಕು. ಚೆಕ್ ಅಥವಾ ಡಿ.ಡಿ. ಮೂಲಕ ಹಣ ಸ್ವೀಕರಿಸುವುದಿಲ್ಲ.

9) ನಿರುಪಯುಕ್ತ ಬಿಡಿಭಾಗಗಳು, ಟಯರ್, ಟ್ಯೂಬ್‌ಗಳ ಮಾರಾಟ ತೆರಿಗೆಯನ್ನು ಯಶಸ್ವಿ ಬಿಡ್‌ದಾರರಿಂದ ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ವಸೂಲಿಸಲಾಗುವುದು.

10) ಹರಾಜು ಮುಗಿದ ನಂತರ ಯಶಸ್ವಿಯಾದ ಟೆಂಡರ್ ಕಮ್ ಬಿಡ್‌ದಾರರಿಗೆ ಠೇವಣಿ ಹಣವನ್ನು ಕೂಡಲೇ ಹಿಂತಿರುಗಿಸಲಾಗುವುದು. ಹರಾಜಿನಲ್ಲಿ ಭಾಗವಹಿಸುವ ಸಾರ್ವಜನಿಕರು ಇಲಾಖಾ ನಿಯಮಗಳಿಗೆ ಬದ್ದರಾಗಿರುತ್ತಾರೆ.

11) ಟೆಂಡರ್ ಹರಾಜಿನಲ್ಲಿ ಭಾಗವಹಿಸಿದ ಯಶಸ್ವಿಯಾದ ಟೆಂಡರ್ ಬಿಡ್‌ದಾರರು ತಮ್ಮ ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹವರು ಮುಂಗಡವಾಗಿ ಪಾವತಿಸಿದ್ದ ಹಣದಲ್ಲಿ ನಷ್ಟವನ್ನು ವಸೂಲಿ ಮಾಡಿಕೊಳ್ಳುವ ಅಧಿಕಾರವನ್ನು ಕಾಯ್ದಿರಿಸಲಾಗಿದೆ. ಈ ರೀತಿ ವಸೂಲಿ ಮಾಡಲು ತೀರ್ಮಾನಿಸಿದ ಹಣವನ್ನು ಸ್ಥಳದಲ್ಲಿಯೇ ಪಾವತಿಸತಕ್ಕದ್ದು. ತಪ್ಪಿದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ರೀತಿ ಕ್ರಮ ಜರುಗಿಸಲಾಗುವುದು.

12) ಹರಾಜಿನಲ್ಲಿ ಯಾವುದೇ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದು ಮಾಡುವ ಇಲ್ಲವೇ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರು ಹೊಂದಿರುತ್ತಾರೆ ಮತ್ತು ಅವರ ತೀರ್ಮಾನವೇ ಅಂತಿಮವಾದುದು.

13) ಮೇಲೆ ತಿಳಿಸಿರುವ ಹರಾಜಿನ ವಿಷಯದಲ್ಲಿ ಯಾವುದೇ ವಾದ ವಿವಾದ ಉಂಟಾದಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.

14) ಹರಾಜಿನಲ್ಲಿ ಭಾಗವಹಿಸುವ ಎಲ್ಲಾ ಬಿಡ್‌ದಾರರು ತಮ್ಮ ಸಂಪೂರ್ಣ ವಿಳಾಸವನ್ನು ಬರೆದಿರುವ ಚೀಟಿಯೊಂದಿಗೆ ಠೇವಣಿ ಹಣವನ್ನು ಪಾವತಿ ಮಾಡತಕ್ಕದ್ದು.

15) ಭರ್ತಿ ಮಾಡಿದ ಟೆಂಡರ್ ಫಾರಂಗಳಲ್ಲಿ ಟೆಂಡರ್‌ದಾರರು ತಮ್ಮ ಸಂಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ನಮೂದಿಸಿರಬೇಕು.

16) ಹೆಚ್ಚಿನ ಮಾಹಿತಿ ಬೇಕಾದಲ್ಲಿ ಜಿಲ್ಲಾ ಪೊಲೀಸ್ ಕಚೇರಿ, ಬಳ್ಳಾರಿಯಲ್ಲಿ ಖುದ್ದಾಗಿ ಬಂದು ಪಡೆಯತಕ್ಕದ್ದು.

ಪೊಲೀಸ್ ಸೂಪರಿಂಟೆಂಡೆಂಟ್,
ಬಳ್ಳಾರಿ

ಪಿ.ಆರ್. 355

## ಪೊಲೀಸ್ ಸೂಪರಿಂಟೆಂಡೆಂಟ್‌ರವರ ಕಚೇರಿ, ಬಳ್ಳಾರಿ

## ಅಧಿಸೂಚನೆ

**ಸಂಖ್ಯೆ:40/ಲೆಕ್ಕ-7/ಪಿಎಂಟಿ/2006-07, ದಿನಾಂಕ: 22ನೇ ಜೂನ್ 2006**

**ವಿಷಯ:** ಬಳ್ಳಾರಿ ಜಿಲ್ಲೆಯ ಪೊಲೀಸ್ ವಾಹನಗಳ 2005-06ನೇ ಸಾಲಿನ ನಿರುಪಯುಕ್ತ ವಾಹನಗಳನ್ನು ಟೆಂಡರ್ ಕಂ ಬಹಿರಂಗ ಮರು ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರ ಆದೇಶ ಸಂಖ್ಯೆ: ಹೆಚ್ ಡಿ/198/ಇಎಂವಿ/ 2000/ ದಿನಾಂಕ:19.09.2003.

2. ಪ್ರಧಾನ ಕಛೇರಿ, ಬೆಂಗಳೂರು ರವರ ಪತ್ರ ಸಂ: ಎಂ.ಟಿ (1)/ 37/ 00-01 (ವ್ಯಾಲ್ಯೂಂ-1),ದಿನಾಂಕ:23.09.2000.

3. ಡಿ.ಜಿ. ಮತ್ತು ಐ.ಜಿ.ಪಿ. ಕರ್ನಾಟಕ ರಾಜ್ಯ, ಬೆಂಗಳೂರು ರವರ ಪತ್ರ ಸಂ:ವಾಸಾ (1) 37/2000-01 (ವಾಲ್ಯೂಂ-2), ದಿ:23.03.06.

ಸಾರ್ವಜನಿಕರ ಮಾಹಿತಿಗಾಗಿ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಬಳ್ಳಾರಿಯ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕಾರ್ಯಾಲಯದ ಮುಂಭಾಗದಲ್ಲಿ ಯಥಾಸ್ಥಿತಿಯಲ್ಲಿರುವ ಈ ಕೆಳಕಂಡ ಪೊಲೀಸ್ ವಾಹನಗಳ 2005-2006ನೇ ಸಾಲಿನ ಪೊಲೀಸ್ ವಾಹನಗಳನ್ನು ಟೆಂಡರ್ ಕಂ ಮರು ಹರಾಜು (ಟೆಂಡರ್ ಕಂ ಆಕ್ಷನ್) ಮೂಲಕ ಬಳ್ಳಾರಿ ಜಿಲ್ಲಾ ಸಶಸ್ತ್ರ ಮಿಸಲು ಪಡೆ ಕಚೇರಿಯ ಆವರಣದಲ್ಲಿ ದಿನಾಂಕ:05.08.2006 ರಂದು ಬೆಳಿಗ್ಗೆ 11.00 ಗಂಟೆಗೆ ಬಹಿರಂಗ ಮರು ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಆಸಕ್ತಿಯುಳ್ಳವರು ಭಾಗವಹಿಸಬಹುದು. ನಿರುಪಯುಕ್ತ ವಾಹನಗಳ ವಿವರ ಈ ಕೆಳಗಿನಂತೆ ಇರುತ್ತದೆ.

**2005-2006**

| ಕ್ರ. ಸಂ. | ವಾಹನದ ನೊಂದಣಿ ಸಂಖ್ಯೆ | ಮಾದರಿ | ಖರೀದಿಸಿದ ವರ್ಷ |
|---|---|---|---|
| 1. | ಎಂ. ವೈ.ವೈ. 9679 | ಜೀಪು | 1977 |
| 2. | ಎಂ.ಇ.ಕೆ. 966 | ಜೀಪು | 1979 |
| 3. | ಸಿ.ಎ.ಜಿ. 2005 | ಮೋಟಾರ್ ಸೈಕಲ್ | 1977 |

## ಹರಾಜಿನ ಷರತ್ತು ಮತ್ತು ನಿಬಂಧನೆಗಳು

1) ಈ ನಿರುಪಯುಕ್ತ ವಾಹನಗಳು ಜಿಲ್ಲಾ ಕೇಂದ್ರ ಕಾರ್ಯಾಗಾರದ ಆವರಣದಲ್ಲಿ ಇರುತ್ತದೆ. ಅವುಗಳು ಹಾಲಿ ಯಾವ ಸ್ಥಿತಿಯಲ್ಲಿರುತ್ತವೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು.

2) ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಪ್ರತಿಯೊಬ್ಬರು ರೂ. 2,000-00 (ಎರಡು ಸಾವಿರ ರೂಪಾಯಿಗಳು) ಠೇವಣಿ ಪಾವತಿಸದವರು ಹರಾಜಿನಲ್ಲಿ ಭಾಗವಹಿಸುವಂತಿಲ್ಲ.

3) ಟೆಂಡರುಗಳನ್ನು ಸಲ್ಲಿಸಬಯಸುವ ಸಾರ್ವಜನಿಕರು ಮೊಹರು ಮಾಡಿದ ಟೆಂಡರ್ (ಸೀಲ್ಡ್) ಲಕೋಟೆಗಳನ್ನು ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ ಇವರ ವಿಳಾಸಕ್ಕೆ ಲಕೋಟೆಯ ಮೇಲೆ **ನಿರುಪಯುಕ್ತ ವಾಹನಗಳಿಗಾಗಿ** ಎಂದು ಸ್ಪಷ್ಟವಾಗಿ ನಮೂದಿಸಿ ಖುದ್ದಾಗಿ ಇಲ್ಲವೆ ಅಂಚೆ ಮೂಲಕ ದಿನಾಂಕ:28.07.2006 ರ ಸಂಜೆ 4-00 ಗಂಟೆ ಒಳಗಾಗಿ ಈ ಕಚೇರಿಗೆ ತಲುಪುವಂತೆ ಸಲ್ಲಿಸತಕ್ಕದ್ದು.

4) ಟೆಂಡರ್ ಫಾರಂನಲ್ಲಿ ಬಿಡ್ ಮೊತ್ತವನ್ನು ಅಂಕಿ ಮತ್ತು ಅಕ್ಷರ ಎರಡರಲ್ಲಿಯೂ ಸ್ಪಷ್ಟವಾಗಿ ನಮೂದಿಸಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರು ತಮ್ಮ ಪೂರ್ಣ ಸಹಿ ಮಾಡಿ ತಿದ್ದುಪಡಿಯನ್ನು ದೃಡೀಕರಿಸಬೇಕು.

5) ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗದು.

6) ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆ ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಗಳನ್ನು ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ ಅವರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯಾಗಲೀ ಸಾರ್ವಜನಿಕರ ಸಮ್ಮುಖದಲ್ಲಿ ಕರೆದು ಬಹಿರಂಗಪಡಿಸುವುದು. ಮರು ಹರಾಜಿನಲ್ಲಿ ದಾಖಲಾದ ಅತೀ ಹೆಚ್ಚಿನ ಬೆಲೆ ಅಥವಾ ಟೆಂಡರ್‌ನಲ್ಲಿ ದಾಖಲಿಸಿದ ಅತೀ ಹೆಚ್ಚಿನ ಬೆಲೆ ಇವೆರಡರಲ್ಲಿ ಅತೀ ಹೆಚ್ಚಿನ ದರ ದಾಖಲಿಸಿದವರನ್ನು ಯಶಸ್ವಿ ಟೆಂಡರ್/ ಬಿಡ್‌ದಾರರೆಂದು ಪರಿಗಣಿಸಲಾಗುವುದು.

7) ಯಶಸ್ವಿಯಾದ ಟೆಂಡರ್/ ಬಿಡ್‌ದಾರರು ಅಂಗೀಕೃತ ಹೆಚ್ಚಿನ ಬೆಲೆಯ ಶೇಕಡ 25 ರಷ್ಟು (ಠೇವಣಿ ಬಿಟ್ಟು) ಹಣವನ್ನು ಹರಾಜಿನ ಸ್ಥಳದಲ್ಲಿ ದಿನವೇ ತುಂಬತಕ್ಕದ್ದು. ಈ ಹಣಕ್ಕೆ ಯಾವುದೇ ಬಡ್ಡಿ ನೀಡಲಾಗದು. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರಿಂದ ವಿಲೇವಾರಿಗೆ ಒಪ್ಪಿಗೆ ಬಂದ ನಂತರವೇ ಉಳಿದ ಹಣವನ್ನು ಬಿಡ್‌ದಾರರಿಂದ ಕಟ್ಟಿಸಿಕೊಂಡು ವಾಹನಗಳನ್ನು ವಹಿಸಿಕೊಡಲಾಗುವುದು. ಈ ವಾಹನಗಳನ್ನು ಯಶಸ್ವಿ ಬಿಡ್‌ದಾರರು ತಮ್ಮ ಸ್ವಂತ ಖರ್ಚಿನಲ್ಲಿ ತೆಗೆದುಕೊಂಡು ಹೋಗುವುದು. ತಪ್ಪಿದಲ್ಲಿ ಅವರು ತುಂಬಿದ ಶೇಕಡಾ 25 ರಷ್ಟು ಹಣವನ್ನು ಸಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆಯನ್ನು ಹೊರಡಿಸಿ ವಾಹನಗಳನ್ನು ಮರು ಹರಾಜು ಮಾಡಲಾಗುವುದು.

8) ಎಲ್ಲಾ ಹಣವನ್ನು ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರ ಕಚೇರಿಯ ನಗದು ಶಾಖೆಯಲ್ಲಿ ನಗದಾಗಿಯೇ ತುಂಬಬೇಕು. ಚೆಕ್ ಅಥವಾ ಡಿ.ಡಿ. ಮೂಲಕ ಹಣ ಸ್ವೀಕರಿಸುವುದಿಲ್ಲ.

9) ನಿರುಪಯುಕ್ತ ವಾಹನಗಳಿಗೆ ಮಾರಾಟ ತೆರಿಗೆಯನ್ನು ಯಶಸ್ವಿ ಬಿಡ್‌ದಾರರಿಂದ ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ವಸೂಲಿಸಲಾಗುವುದು.

10) ಹರಾಜು ಮುಗಿದ ನಂತರ ಯಶಸ್ವಿಯಾದ ಟೆಂಡರ್ ಕಮ್ ಬಿಡ್‌ದಾರರಿಗೆ ಠೇವಣಿ ಹಣವನ್ನು ಕೂಡಲೇ ಹಿಂತಿರುಗಿಲಾಗುವುದು. ಹರಾಜಿನಲ್ಲಿ ಭಾಗವಹಿಸುವ ಸಾರ್ವಜನಿಕರು ಇಲಾಖಾ ನಿಯಮಗಳಿಗೆ ಬದ್ಧರಾಗಿರುತ್ತಾರೆ.

11) ಟೆಂಡರ್ ಹರಾಜಿನಲ್ಲಿ ಭಾಗವಹಿಸಿದ ಯಶಸ್ವಿಯಾದ ಟೆಂಡರ್ ಬಿಡ್‌ದಾರರು ತಮ್ಮ ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹವರು ಮುಂಗಡವಾಗಿ ಪಾವತಿಸಿದ್ದ ಹಣದಲ್ಲಿ ನಷ್ಟವನ್ನು ವಸೂಲಿ ಮಾಡಿಕೊಳ್ಳುವ ಅಧಿಕಾರವನ್ನು ಕಾಯ್ದಿರಿಸಲಾಗಿದೆ. ಈ ರೀತಿ ವಸೂಲಿ ಮಾಡಲು ತೀರ್ಮಾನಿಸಿದ ಹಣವನ್ನು ಸ್ಥಳದಲ್ಲಿಯೇ ಪಾವತಿಸತಕ್ಕದ್ದು. ತಪ್ಪಿದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ರೀತಿ ಕ್ರಮ ಜರುಗಿಸಲಾಗುವುದು.

12) ಹರಾಜಿನಲ್ಲಿ ಯಾವುದೇ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದು ಮಾಡುವ ಇಲ್ಲವೇ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರು ಹೊಂದಿರುತ್ತಾರೆ ಮತ್ತು ಅವರ ತೀರ್ಮಾನವೇ ಅಂತಿಮವಾದುದು.

13) ಮೇಲೆ ತಿಳಿಸಿರುವ ಹರಾಜಿನ ವಿಷಯದಲ್ಲಿ ಯಾವುದೇ ವಾದ ವಿವಾದ ಉಂಟಾದಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.

14) ಹರಾಜಿನಲ್ಲಿ ಭಾಗವಹಿಸುವ ಎಲ್ಲಾ ಬಿಡ್‌ದಾರರು ತಮ್ಮ ಸಂಪೂರ್ಣ ವಿಳಾಸವನ್ನು ಬರೆದಿರುವ ಚೀಟಿಯೊಂದಿಗೆ ಠೇವಣಿ ಹಣವನ್ನು ಪಾವತಿ ಮಾಡತಕ್ಕದ್ದು.

15) ಭರ್ತಿ ಮಾಡಿದ ಟೆಂಡರ್ ಫಾರಂಗಳಲ್ಲಿ ಟೆಂಡರ್‌ದಾರರು ತಮ್ಮ ಸಂಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ನಮೂದಿಸಿರಬೇಕು.

16) ಹೆಚ್ಚಿನ ಮಾಹಿತಿ ಬೇಕಾದಲ್ಲಿ ಜಿಲ್ಲಾ ಪೊಲೀಸ್ ಕಚೇರಿ, ಬಳ್ಳಾರಿಯಲ್ಲಿ ಖುದ್ದಾಗಿ ಬಂದು ಪಡೆಯತಕ್ಕದ್ದು.

ಪೊಲೀಸ್ ಸೂಪರಿಂಟೆಂಡೆಂಟ್,

ಪಿ.ಆರ್. 357

ಬಳ್ಳಾರಿ

# ಪೊಲೀಸ್ ಸೂಪರಿಂಟೆಂಡೆಂಟ್‌ರವರ ಕಚೇರಿ, ಬಳ್ಳಾರಿ

## ಅಧಿಸೂಚನೆ

**ಸಂಖ್ಯೆ:40/ಲೆಕ್ಕ-7/ಪಿಎಂಟಿ/2006-07, ದಿನಾಂಕ: 22ನೇ ಜೂನ್ 2006**

**ವಿಷಯ:** ಬಳ್ಳಾರಿ ಜಿಲ್ಲೆಯ ಪೊಲೀಸ್ ವಾಹನಗಳ 2005-06ನೇ ಸಾಲಿನ ನಿರುಪಯುಕ್ತ ವಾಹನಗಳನ್ನು ಟೆಂಡರ್ ಕಂ ಬಹಿರಂಗ ಮರು ಹರಾಜು ಮೂಲಕ ವಿಲೇವಾರಿ ಮಾಡುವ ಮಾಡುವ ಬಗ್ಗೆ

**ಉಲ್ಲೇಖ:** 1. ಸರ್ಕಾರ ಆದೇಶ ಸಂಖ್ಯೆ: ಹೆಚ್ ಡಿ/198/ಇ.ಎಂ.ವಿ./ 2000/ ದಿನಾಂಕ:19.06.2003.

2. ಡಿ.ಜಿ. ಮತ್ತು ಐ.ಜಿ.ಪಿ. ಕರ್ನಾಟಕ ರಾಜ್ಯ, ಬೆಂಗಳೂರು ರವರ ಪತ್ರ ಸಂ:ವಾಸಾ (1) 11/2006-07 ದಿ:30.05.06.

ಸಾರ್ವಜನಿಕರ ಮಾಹಿತಿಗಾಗಿ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಬಳ್ಳಾರಿ ಜಿಲ್ಲಾ ಸಶಸ್ತ್ರ ಮೀಸಲು ಪಡೆ ಕಛೇರಿಯ ಮುಂಭಾಗದಲ್ಲಿ ಯಥಾಸ್ಥಿತಿಯಲ್ಲಿರುವ ಈ ಕೆಳಕಂಡ ಪೊಲೀಸ್ ವಾಹನಗಳ 2005-2006ನೇ ಸಾಲಿನ ಪೊಲೀಸ್ ವಾಹನಗಳನ್ನು ಟೆಂಡರ್ ಕಂ ಹರಾಜು (ಟೆಂಡರ್ ಕಂ ಆಕ್ಷನ್) ಮೂಲಕ ಬಳ್ಳಾರಿ ಜಿಲ್ಲಾ ಸಶಸ್ತ್ರ ಮಿಸಲು ಪಡೆ ಕಚೇರಿಯ ಆವರಣದಲ್ಲಿ ದಿನಾಂಕ:05.08.2006 ರಂದು ಬೆಳಿಗ್ಗೆ 11.00 ಗಂಟೆಗೆ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಆಸಕ್ತಿಯುಳ್ಳವರು ಭಾಗವಹಿಸಬಹುದು. ನಿರುಪಯುಕ್ತ ವಾಹನಗಳ ವಿವರ ಈ ಕೆಳಗಿನಂತೆ ಇರುತ್ತದೆ.

**2005-2006**

| ಕ್ರ. ಸಂ. | ವಾಹನದ ನೊಂದಣಿ ಸಂಖ್ಯೆ | ಮಾದರಿ | ಖರೀದಿಸಿದ ವರ್ಷ |
|---|---|---|---|
| 1. | ಸಿ.ಎ.ಜಿ. 2056 | ಮಹೇಂದ್ರ ಜೀಪು | 1985 |
| 2. | ಸಿ.ಎ.ಜಿ. 2111 | ಮಹೇಂದ್ರ ಜೀಪು | 1989 |
| 3. | ಸಿ.ಎ.ಜಿ. 2085 | ಬುಲೆಟ್ ಮೋಟಾರ್ ಸೈಕಲ್ | 1987 |
| 4. | ಸಿ.ಎ.ಜಿ. 2040 | ಬುಲೆಟ್ ಮೋಟಾರ್ ಸೈಕಲ್ | 1983 |
| 5. | ಸಿ.ಎ.ಜಿ. 2009 | ಬುಲೆಟ್ ಮೋಟಾರ್ ಸೈಕಲ್ | 1981 |

## ಹರಾಜಿನ ಷರತ್ತು ಮತ್ತು ನಿಬಂಧನೆಗಳು

1) ಈ ನಿರುಪಯುಕ್ತ ವಾಹನಗಳು ಜಿಲ್ಲಾ ಕೇಂದ್ರ ಕಾರ್ಯಾಗಾರದ ಆವರಣದಲ್ಲಿ ಇರುತ್ತದೆ. ಅವುಗಳು ಹಾಲಿ ಯಾವ ಸ್ಥಿತಿಯಲ್ಲಿರುತ್ತವೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು.
2) ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಪ್ರತಿಯೊಬ್ಬರು ರೂ. 2,000-00 (ಎರಡು ಸಾವಿರ ರೂಪಾಯಿಗಳು) ಠೇವಣಿ ಪಾವತಿಸದವರು ಠೇವಣಿ ಪಾವತಿಸದವರು ಹರಾಜಿನಲ್ಲಿ ಭಾಗವಹಿಸುವಂತಿಲ್ಲ.
3) ಟೆಂಡರುಗಳನ್ನು ಸಲ್ಲಿಸಬಯಸುವ ಸಾರ್ವಜನಿಕರು ಮೊಹರು ಮಾಡಿದ ಟೆಂಡರ್ (ಸೀಲ್ಡ್) ಲಕೋಟೆಗಳನ್ನು ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ ಇವರ ವಿಳಾಸಕ್ಕೆ ಲಕೋಟೆಯ ಮೇಲೆ **ನಿರುಪಯುಕ್ತ ವಾಹನಗಳಿಗಾಗಿ** ಎಂದು ಸ್ಪಷ್ಟವಾಗಿ ನಮೂದಿಸಿ ಖುದ್ದಾಗಿ ಇಲ್ಲವೆ ಅಂಚೆ ಮೂಲಕ ದಿನಾಂಕ:28.07.2006 ರ ಸಂಜೆ 4-00 ಗಂಟೆ ಒಳಗಾಗಿ ಈ ಕಚೇರಿಗೆ ತಲುಪುವಂತೆ ಸಲ್ಲಿಸತಕ್ಕದ್ದು.
4) ಟೆಂಡರ್ ಫಾರಂನಲ್ಲಿ ಬಿಡ್ ಮೊತ್ತವನ್ನು ಅಂಕಿ ಮತ್ತು ಅಕ್ಷರ ಎರಡರಲ್ಲಿಯೂ ಸ್ಪಷ್ಟವಾಗಿ ನಮೂದಿಸಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರು ತಮ್ಮ ಪೂರ್ಣ ಸಹಿ ಮಾಡಿ ತಿದ್ದುಪಡಿಯನ್ನು ದೃಡೀಕರಿಸಬೇಕು.
5) ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗದು.
6) ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆ ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಗಳನ್ನು ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ ಅವರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯಾಗಲೀ ಸಾರ್ವಜನಿಕರ ಸಮ್ಮುಖದಲ್ಲಿ ಕರೆದು ಬಹಿರಂಗಪಡಿಸುವುದು. ಹರಾಜಿನಲ್ಲಿ ದಾಖಲಾದ ಅತೀ ಹೆಚ್ಚಿನ ಬೆಲೆ ಅಥವಾ ಟೆಂಡರ್‌ನಲ್ಲಿ ದಾಖಲಿಸಿದ ಅತೀ ಹೆಚ್ಚಿನ ಬೆಲೆ ಇವೆರಡರಲ್ಲಿ ಅತೀ ಹೆಚ್ಚಿನ ದರ ದಾಖಲಿಸಿದವರನ್ನು ಯಶಸ್ವಿ ಟೆಂಡರ್/ ಬಿಡ್‌ದಾರರೆಂದು ಪರಿಗಣಿಸಲಾಗುವುದು.
7) ಯಶಸ್ವಿಯಾದ ಟೆಂಡರ್/ ಬಿಡ್‌ದಾರರು ಅಂಗೀಕೃತ ಹೆಚ್ಚಿನ ಬೆಲೆಯ ಶೇಕಡ 25 ರಷ್ಟು (ಠೇವಣಿ ಬಿಟ್ಟು) ಹಣವನ್ನು ಹರಾಜಿನ ಸ್ಥಳದಲ್ಲಿ ದಿನವೇ ತುಂಬತಕ್ಕದ್ದು. ಈ ಹಣಕ್ಕೆ ಯಾವುದೇ ಬಡ್ಡಿ ನೀಡಲಾಗದು. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರಿಂದ ವಿಲೇವಾರಿಗೆ ಒಪ್ಪಿಗೆ ಬಂದ ನಂತರವೇ ಉಳಿದ ಹಣವನ್ನು ಬಿಡ್‌ದಾರರಿಂದ ಕಟ್ಟಿಸಿಕೊಂಡು ವಾಹನಗಳನ್ನು ವಹಿಸಿಕೊಡಲಾಗುವುದು.ಈ ವಾಹನಗಳನ್ನು ಯಶಸ್ವಿ ಬಿಡ್‌ದಾರರು ತಮ್ಮ ಸ್ವಂತ ಖರ್ಚಿನಲ್ಲಿ ತೆಗೆದುಕೊಂಡು ಹೋಗುವುದು. ತಪ್ಪಿದಲ್ಲಿ ಅವರು ತುಂಬಿದ ಶೇಕಡಾ 25 ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆಯನ್ನು ಹೊರಡಿಸಿ ವಾಹನಗಳನ್ನು ಮರು ಹರಾಜು ಮಾಡಲಾಗುವುದು.
8) ಎಲ್ಲಾ ಹಣವನ್ನು ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರ ಕಚೇರಿಯ ನಗದು ಶಾಖೆಯಲ್ಲಿ ನಗದಾಗಿಯೇ ತುಂಬಬೇಕು. ಚೆಕ್ ಅಥವಾ ಡಿ.ಡಿ. ಮೂಲಕ ಹಣ ಸ್ವೀಕರಿಸುವುದಿಲ್ಲ.

9) ನಿರುಪಯುಕ್ತ ವಾಹನಗಳಿಗೆ ಮಾರಾಟ ತೆರಿಗೆಯನ್ನು ಯಶಸ್ವಿ ಬಿಡ್‌ದಾರರಿಂದ ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ವಸೂಲಿಸಲಾಗುವುದು.

10) ಹರಾಜು ಮುಗಿದ ನಂತರ ಯಶಸ್ವಿಯಾದ ಟೆಂಡರ್ ಕಮ್ ಬಿಡ್‌ದಾರರಿಗೆ ಠೇವಣಿ ಹಣವನ್ನು ಕೂಡಲೇ ಹಿಂತಿರುಗಿಲಾಗುವುದು. ಹರಾಜಿನಲ್ಲಿ ಭಾಗವಹಿಸುವ ಸಾರ್ವಜನಿಕರು ಇಲಾಖಾ ನಿಯಮಗಳಿಗೆ ಬದ್ಧರಾಗಿರುತ್ತಾರೆ.

11) ಟೆಂಡರ್ ಹರಾಜಿನಲ್ಲಿ ಭಾಗವಹಿಸಿದ ಯಶಸ್ವಿಯಾದ ಟೆಂಡರ್ ಬಿಡ್‌ದಾರರು ತಮ್ಮ ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗು ವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹವರು ಮುಂಗಡವಾಗಿ ಪಾವತಿಸಿದ್ದ ಹಣದಲ್ಲಿ ನಷ್ಟವನ್ನು ವಸೂಲಿ ಮಾಡಿಕೊಳ್ಳುವ ಅಧಿಕಾರವನ್ನು ಕಾಯ್ದಿರಿಸಲಾಗಿದೆ. ಈ ರೀತಿ ವಸೂಲಿ ಮಾಡಲು ತೀರ್ಮಾನಿಸಿದ ಹಣವನ್ನು ಸ್ಥಳದಲ್ಲಿಯೇ ಪಾವತಿಸತಕ್ಕದ್ದು. ತಪ್ಪಿದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ರೀತಿ ಕ್ರಮ ಜರುಗಿಸಲಾಗುವುದು.

12) ಹರಾಜಿನಲ್ಲಿ ಯಾವುದೇ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದು ಮಾಡುವ ಇಲ್ಲವೇ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರು ಹೊಂದಿರುತ್ತಾರೆ ಮತ್ತು ಅವರ ತೀರ್ಮಾನವೇ ಅಂತಿಮವಾದುದು.

13) ಮೇಲೆ ತಿಳಿಸಿರುವ ಹರಾಜಿನ ವಿಷಯದಲ್ಲಿ ಯಾವುದೇ ವಾದ ವಿವಾದ ಉಂಟಾದಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.

14) ಹರಾಜಿನಲ್ಲಿ ಭಾಗವಹಿಸುವ ಎಲ್ಲಾ ಬಿಡ್‌ದಾರರು ತಮ್ಮ ಸಂಪೂರ್ಣ ವಿಳಾಸವನ್ನು ಬರೆದಿರುವ ಚೀಟಿಯೊಂದಿಗೆ ಠೇವಣಿ ಹಣವನ್ನು ಪಾವತಿ ಮಾಡತಕ್ಕದ್ದು.

15) ಭರ್ತಿ ಮಾಡಿದ ಟೆಂಡರ್ ಫಾರಂಗಳಲ್ಲಿ ಟೆಂಡರ್‌ದಾರರು ತಮ್ಮ ಸಂಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ನಮೂದಿಸಿರಬೇಕು.

16) ಹೆಚ್ಚಿನ ಮಾಹಿತಿ ಬೇಕಾದಲ್ಲಿ ಜಿಲ್ಲಾ ಪೋಲೀಸ್ ಕಚೇರಿ, ಬಳ್ಳಾರಿಯಲ್ಲಿ ಖುದ್ದಾಗಿ ಬಂದು ಪಡೆಯತಕ್ಕದ್ದು.

ಪೊಲೀಸ್ ಸೂಪರಿಂಟೆಂಡೆಂಟ್,
ಬಳ್ಳಾರಿ

ಪಿ.ಆರ್. 358

## ಲೋಕೋಪಯೋಗಿ ಇಲಾಖೆ

### ಸಹಾಯಕ ಕಾರ್ಯಪಾಲಕ ಅಭಿಯಂತರವರ ಕಾರ್ಯಾಲಯ, ಲೋಕೋಪಯೋಗಿ ಉಪ-ವಿಭಾಗ ನಂ.4, ಚನ್ನಗಿರಿ

### ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ: ಸಕಾಸ:ಲೋಇ:ಅನುಪಯುಕ್ತ ಸಾಮಗ್ರಿ:ವಿಲೇ 2006-07/125, ದಿನಾಂಕ: 17ನೇ ಜೂನ್ 2006**

**ವಿಷಯ:** ಅನುಪಯುಕ್ತ ದಾಸ್ತಾನು ಮತ್ತು ಯಂತ್ರ ಸ್ಥಾವರ ಸಾಮಗ್ರಿಗಳನ್ನು ಟೆಂಡರ್ ಕಂ ಬಹಿರಂಗ ಹರಾಜು ಮಾಡುವ ಬಗ್ಗೆ .

**ಉಲ್ಲೇಖ:** 1. ಕಾರ್ಯಪಾಲಕ ಅಭಿಯಂತರರು, ಲೋ.ಇ. ವಿಭಾಗ, ದಾವಣಗೆರೆರವರ ಪತ್ರ ಸಂ:61606:ದಿ:6.10.2005.

2. ಅಧೀಕ್ಷಕ ಅಭಿಯಂತರರು, ಲೋ.ಇ. ವೃತ್ತ ಶಿವಮೊಗ್ಗರವರ ಪತ್ರ ಸಂ:624: ದಿ:13.6.2006.

ಈ ಮೂಲಕ ಸಾರ್ಜನಿಕರಿಗೆ ತಿಳಿಯುಪಡಿಸುವುದೇನೆಂದರೆ, ಅನುಪಯುಕ್ತ ದಾಸ್ತಾನು ಹಾಗೂ ಯಂತ್ರ ಸ್ಥಾವರ ಸಾಮಗ್ರಿಗಳನ್ನು ಈ ಕಛೇರಿ ಆವರಣದಲ್ಲಿ ಟೆಂಡರ್ ಕಂ ಬಹಿರಂಗ ಹರಾಜು ಮಾಡಲಾಗುವುದು. ಇಚ್ಛೆಯುಳ್ಳವರು ಭಾಗವಹಿಸಲು ಕೋರಿದೆ.

### ನಿಬಂಧನೆ ಮತ್ತು ಷರತ್ತುಗಳು

1. ಸಾಮಗ್ರಿಗಳನ್ನು ವೀಕ್ಷಿಸುವ ದಿ: 29.6.06 ಕಛೇರಿ ವೇಳೆಯಲ್ಲಿ.
2. ಟೆಂಡರ್ ನಮೂನೆ ಪಡೆಯುವ ದಿ: 16.7.06 ಕಛೇರಿ ವೇಳೆಯಲ್ಲಿ.
3. ಠೇವಣಿ ತುಂಬುವ ದಿ:21.7.06 ರಂದು ಬೆಳಿಗ್ಗೆ 10 ರಿಂದ 11.30ರೊಳಗೆ.
4. ಭರ್ತಿ ಮಾಡಿದ ಟೆಂಡರ್‌ನ್ನು ಸ್ವೀರಿಸುವ ದಿ:21.7.06ರ ಶುಕ್ರವಾರ 12 ಗಂಟೆಯೊಳಗೆ.
5. ಟೆಂಡರ್ ಬಾಕ್ಸ್‌ನ್ನು ತೆಗೆಯುವ ದಿ:21.7.06ರ ಶುಕ್ರವಾರ ಹರಾಜು ಮುಗಿದ ಮೇಲೆ.
6. ಹರಾಜು ಮಾಡುವ ದಿ: 21.7.06ರ ಮಧ್ಯಾಹ್ನ 1.00 ಗಂಟೆಯ ನಂತರ.
7. ಟೆಂಡರ್ ನಮೂನೆ ಖರೀದಿ ಬೆಲೆ ರೂ. 10.00 ಮರು ಪಾವತಿ ಇರುವುದಿಲ್ಲ.
8. ಪ್ರತಿಯೊಬ್ಬ ಸವಾಲುದಾರರು ಮತದಾರರ ಗುರುತಿನ ಚೀಟಿ ಅಥವಾ 3 ತಿಂಗಳೊಳಗಿನ ಭಾವಚಿತ್ರ (ದೃಢೀಕೃತ) ದೊಂದಿಗೆ ನಿವಾಸದ ದೃಢೀಕರಣ ಪತ್ರವನ್ನು ಗ್ರಾಮಪಂಚಾಯಿತಿ ಕಾರ್ಯದರ್ಶಿ, ತಹಶೀಲ್ದಾರ್, ಪುರ ಪಂಚಾಯಿತಿ ಮುಖ್ಯಾಧಿಕಾರಿ ಇವರಿಂದ ದೃಢೀಕರಿಸಿ ರೂ. 10.000 (ಹತ್ತು ಸಾವಿರ) ಠೇವಣಿ ತುಂಬಿ ಟೆಂಡರ್ ನಮೂನೆಗಳನ್ನು ಪಡೆದು ಟೆಂಡರ್ ಕಂ ಬಹಿರಂಗ ಹರಾಜಿನಲ್ಲಿ ಭಾಗವಹಿಸುವುದು. ಮುಂಗಡ ಹಣಕ್ಕೆ ಯಾವುದೇ ಬಡ್ಡಿ ನೀಡಲಾಗುವುದಿಲ್ಲ.
9. ಪಡಿತರ ಚೀಟಿ, ಡ್ರೈವಿಂಗ್ ಲೈಸೆನ್ಸ್, ವಿಸಿಟಿಂಗ್ ಕಾರ್ಡ್, ಮೊಬೈಲ್ ನಂ. ಕರಾರು ಪತ್ರ, ಸಾಕ್ಷಿ ಜಾಮೀನು, ಗ್ಯಾರಂಟಿ ಇತ್ಯಾದಿ ಯಾವುದೇ ಹೇಳಿಕೆಗಳನ್ನು ಪರಿಗಣಿಸುವುದಿಲ್ಲ.
10. ಟೆಂಡರ್ ದರವನ್ನು ಅಂಕಿಯಲ್ಲಿ ಮತ್ತು ಅಕ್ಷರಗಳಲ್ಲಿ ತುಂಬಿ ಮೊಹರು ಮಾಡಿದ ಲಕೋಟೆಯಲ್ಲಿ ಟೆಂಡರ್ ಬಾಕ್ಸ್‌ನಲ್ಲಿ ಹಾಕುವುದು. ಅದೇ ದಿನವೇ ಬಹಿರಂಗ ಹರಾಜು ಮಾಡಿ ಹರಾಜು ಮುಗಿದ ಕೂಡಲೇ ಟೆಂಡರ್ ಬಾಕ್ಸ್ ತೆರೆದು ಟೆಂಡರ್ ಅಥವಾ ಹರಾಜಿನ ಅತಿ ಹೆಚ್ಚಿನ ಸವಾಲನ್ನು ಪರಿಗಣಿಸಲಾಗುವುದು.

11. ಟೆಂಡರ್ ಕಂ ಹರಾಜಿನಲ್ಲಿ ಅಥವಾ ಮೊಹರು ಮಾಡಿದ ಲಕೋಟೆಯಲ್ಲಿ ಅತ್ಯಂತ ಹೆಚ್ಚಿನ ಬಿಡ್ಡಿಂಗ್‌ಗೆ ಮಾನ್ಯತೆ ನೀಡಲಾಗುವುದು. ಹಾಗೂ ಟೆಂಡರ್ ಕಂ ಹರಾಜು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಟೆಂಡರ್ ಕಂ ಹರಾಜು ಪ್ರಕ್ರಿಯೆ ನಡೆಸುವ ಪ್ರಾಧಿಕಾರಕ್ಕೆ ಸೇರಿರುತ್ತದೆ.
12. ಟೆಂಡರ್ ಕಂ ಬಹಿರಂಗ ಹರಾಜು ನಡೆಸುವ ಅಧಿಕಾರಿಯು ಯಾವುದೇ ಕಾರಣಗಳನ್ನು ನೀಡದೆಯೇ ಯಾವುದೇ ಸವಾಲು ಅಥವಾ ಬೆಲೆ ಸೂಚನೆಯನ್ನು ಯಾವುದೇ ವ್ಯಕ್ತಿಯನ್ನು ಅಂಗೀಕರಿಸಲು ತನ್ನ ವಿವೇಚನೆಯಂತೆ ನಿರಾಕರಿಸಬಹುದು.
13. ಟೆಂಡರ್ ಮತ್ತು ಬಹಿರಂಗ ಹರಾಜಿನಲ್ಲಿ ಅಕ್ರೈರುದಾರರು ಆ ದಿನವೇ ಹರಾಜಿನ ಸಂಪೂರ್ಣ ಹಣವನ್ನು ಪಾವತಿಸುವುದು. ತಪ್ಪಿದಲ್ಲಿ ಠೇವಣಿ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
14. ಭರ್ತಿ ಮಾಡಿದ ಟೆಂಡರ್ ಫಾರಂ ಟೆಂಡರ್ ಬಾಕ್ಸ್‌ನಲ್ಲಿ ಹಾಕಿದವರು ಮಾತ್ರ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಅವಕಾಶವಿದೆ.
15. ಠೇವಣಿ ನೀಡಿ ಟೋಕನ್ ಪಡೆದವರಿಗೆ ಮಾತ್ರ ಹರಾಜಿನ ಸ್ಥಳಕ್ಕೆ ಬರಲು ಅನುಮತಿ ನೀಡಲಾಗುವುದು.
16. ಹರಾಜು ಸಂದರ್ಭದಲ್ಲಿ ತಂಟೆ ತಕರಾರು ಶಾಂತಿ ಭಂಗಕ್ಕೆ ಕಾರಣರಾದವರ ಮೇಲೆ ಕ್ರಮ ಜರುಗಿಸಲು ಪೊಲೀಸ್ ಇಲಾಖೆಗೆ ದೂರು ನೀಡಲಾಗುವುದು.
17. ಟೆಂಡರಿನ ಅಥವಾ ಹರಾಜಿನ ಆಕ್ರೈರುದಾರರು ಮಾರಾಟ ವಹಿವಾಟು ತೆರಿಗೆ (TOT) ಶೇ. 16+1 ರಂತೆ ಪಾವತಿಸುವುದು. ತೆರಿಗೆಯಲ್ಲಿ ಹೆಚ್ಚುವರಿ ವ್ಯತ್ಯಾಸವನ್ನು ಪಾವತಿಸಲು ತಾವೇ ಹೊಣೆಗಾರರಾಗಿರುತ್ತೀರಿ.
18. ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವವರು ಈ ಎಲ್ಲಾ ನಿಬಂಧನೆಗು ಮತ್ತು ಷರತ್ತುಗಳನ್ನು ಒಪ್ಪಿಕೊಳ್ಳಲು ಬದ್ಧರಾಗಿರತಕ್ಕದ್ದು.

**ಡಿ. ಬಸವರಾಜ**
ಸಹಾಯಕ ಕಾರ್ಯಪಾಲಕ ಅಭಿಯಂತರರು,
ಲೋ.ಇ. ಉಪ-ವಿಭಾಗ-4 ಚನ್ನಗಿರಿ.

ಪಿ.ಆರ್. 359

## ಕರ್ನಾಟಕ ಲೋಕಸೇವಾ ಆಯೋಗ
### ಲೋಕಸೇವಾ ಆಯೋಗದ ಕಛೇರಿ "ಉದ್ಯೋಗ ಸೌಧ", ಬೆಂಗಳೂರು
### ತಿದ್ದುಪಡಿ ಸಂಖ್ಯೆ:ಇಪ(1)360/2006-07/ಪಿಎಸ್‌ಸಿ, ದಿನಾಂಕ: 19ನೇ ಜೂನ್ 2006

2005ರ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಪಡೆದ ಅಂಕಗಳ ಮರು ಎಣಿಕೆಗಾಗಿ ಅಭ್ಯರ್ಥಿಗಳು ಕೋರಿರುವ ವಿಷಯಗಳ ಅಂಕಗಳ ಮರು ಎಣಿಕೆಯ ನಂತರ ಈ ಕೆಳಕಂಡ ಅಭ್ಯರ್ಥಿಗಳು ಅವರವರ ನೋಂದಣಿ ಸಂಖ್ಯೆ ಮುಂದೆ ಸೂಚಿಸಿರುವ ವಿಷಯಗಳಲ್ಲಿ ಉತ್ತೀರ್ಣರಾಗಿದ್ದು, ದಿನಾಂಕ: 20.4.2006ರ ಕರ್ನಾಟಕ ರಾಜ್ಯಪತ್ರಲ್ಲಿ ಪ್ರಕಟಿಸಲಾಗಿರುವ ಸದರಿ ಅಧಿವೇಶನದ ಪರೀಕ್ಷಾ ಫಲಿತಾಂಶಗಳ ಪಟ್ಟಿ ಪರಿಶಿಷ್ಟ-'ಎ' ಅಡಿಯಲ್ಲಿ ಸೇರಿಸಿ ಓದಿಕೊಳ್ಳತಕ್ಕದ್ದು:-

**ಪರಿಶಿಷ್ಟ-'ಎ'**

| ಕ್ರ. ಸಂ. | ನೋಂದಣಿ ಸಂಖ್ಯೆ | ವಿಷಯ | ಕೇಂದ್ರ | ದರ್ಜೆ |
|---|---|---|---|---|
| 1 | 62153 | ಅಕೌಂಟ್ಸ್ ಹೈಯರ್ಸ್ | ಬೆಂಗಳೂರು | ಸಾಮಾನ್ಯ |
| 2 | 83238 | ಅಕೌಂಟ್ಸ್ ಹೈಯರ್ಸ್ | ಕೋಲಾರ | ಸಾಮಾನ್ಯ |
| 3 | 63986 | ಎಸ್.ಎ.ಎಸ್‌ಭಾಗ-3 | ಬೆಂಗಳೂರು | ಸಾಮಾನ್ಯ |

ಕಾರ್ಯದರ್ಶಿ ಹಾಗೂ ನಿಯಂತ್ರಕರು
ಇಲಾಖಾ ಪರೀಕ್ಷೆಗಳು ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್. 363

## ಕರ್ನಾಟಕ ಲೋಕಸೇವಾ ಆಯೋಗ
### ಲೋಕಸೇವಾ ಆಯೋಗದ ಕಛೇರಿ "ಉದ್ಯೋಗ ಸೌಧ", ಬೆಂಗಳೂರು
### ತಿದ್ದುಪಡಿ ಸಂಖ್ಯೆ:ಇಪ(2)263/2006-07/ಪಿಎಸ್‌ಸಿ, ದಿನಾಂಕ: 19ನೇ ಜೂನ್ 2006

ಆಯೋಗದ ಅಧಿಸೂಚನೆ ಸಂಖ್ಯೆ:ಇಪ(1)2763/2005-06/ಪಿಎಸ್‌ಸಿ ದಿನಾಂಕ:21.2.2006 ಕರ್ನಾಟಕ ರಾಜ್ಯಪತ್ರ ದಿನಾಂಕ 20.4.2006ಲ್ಲಿ ಪ್ರಕಟಿಸಲಾಗಿರುವ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶದಲ್ಲಿ ಬೆಂಗಳೂರು ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್ 'ಬಿ' ರ ಅಡಿಲ್ಲಿ ಎಸ್.ಎ.ಎಸ್. ಭಾಗ-3 ವಿಷಯದ ಶೀರ್ಷಿಕೆಯ ಕೆಳಗೆ ಸಾಮಾನ್ಯ ದರ್ಜೆ ರಡಿಯಲ್ಲಿನ ನೋಂದಣಿ ಸಂಖ್ಯೆಗಳೊಂದಿಗೆ ನೋಂದಣಿ ಸಂಖ್ಯೆ:64160ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ ಹಾಗೂ ನಿಯಂತ್ರಕರು
ಇಲಾಖಾ ಪರೀಕ್ಷೆಗಳು ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್. 364

## ಕೃಷಿ ಇಲಾಖೆ
### ಜಂಟಿ ಕೃಷಿ ನಿರ್ದೇಶಕರವರ ಕಛೇರಿ, ಚಿತ್ರದುರ್ಗ
### ನಂ/ ಜಕೃನಿ:ಚಿ:ಲೆಕ್ಕ-3:ಅನು:ವಸ್ತು ವಿಲೇ: 2006-07, ದಿನಾಂಕ: 5ನೇ ಮೇ 2006

**ವಿಷಯ:** ಜಂಟಿ ಕೃಷಿ ನಿರ್ದೇಶಕರು, ಚಿತ್ರದುರ್ಗ ಕಛೇರಿಯ ಅನುಪಯುಕ್ತ ವಸ್ತುಗಳ ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ

**ಉಲ್ಲೇಖ:** ಕೃಷಿ ಆಯುಕ್ತರ ಕಾರ್ಯಾಲಯ ಬೆಂಗಳೂರು ಇವರ ಪತ್ರ ಸಂ:ಸಾಮಾನ್ಯ:ಜವ:ಅನುಪ:60:2005-06:ದಿನಾಂಕ:10 :18.4.2006.

ಜಂಟಿ ಕೃಷಿ ನಿರ್ದೇಶಕರು, ಚಿತ್ರದುರ್ಗ ಕಛೇರಿಯ ಅನುಪಯುಕ್ತ ವಸ್ತುಗಳನ್ನು ಬಹಿರಂಗ ಹರಾಜಿನ ಮೂಲಕ ಲಭ್ಯವಿರುವ ಕ್ರ.ಸಂ. 1 ರಿಂದ 4 ರವರೆಗಿನ ಅನುಪಯುಕ್ತ ವಸ್ತುಗಳನ್ನು ಕೆಳಕಂಡ ನಿಬಂಧನೆಗೊಳಪಟ್ಟು ಸದರಿ ಕಛೇರಿಯ ಆವರಣದಲ್ಲಿ ಯಾವ ರೀತಿಯಲ್ಲಿ ಇವೆಯೋ ಅದೇ ರೀತಿ ದಿನಾಂಕ:14.5.2006 ರಂದು 11.00 ರಿಂದ 1.30 ಗಂಟೆಗೆ ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲಾಗುವುದು ಆಸಕ್ತಿಯುಳ್ಳ ಸಾರ್ವಜನಿಕರು ಹರಾಜಿನಲ್ಲಿ ಭಾಗವಹಿಸಲು ಈ ಮೂಲಕ ಕೋರಲಾಗಿದೆ.

**ಅನುಪಯುಕ್ತ ವಸ್ತುಗಳ ವಿವರದ ಪಟ್ಟಿ**

| ಕ್ರ. ಸಂ. | ದಾಸ್ತಾನುಗಳ ವಿವರ | ಪರಿಮಾಣ |
|---|---|---|
| 1 | ಅಲ್ಮೇರಾ | 10 ಸಂಖ್ಯೆ |
| 2 | ಡೂಪ್ಲಿ ಕೇಟರ್ | 1 ಸಂಖ್ಯೆ |
| 3 | ಜೆರಾಕ್ಸ್ ಮಿಷನ್ | 1 ಸಂಖ್ಯೆ |
| 4 | ಸೌರಶಕ್ತಿ (ಲ್ಯಾಂಪ್) | 1 ಸಂಖ್ಯೆ |

**ನಿಬಂಧನೆಗಳು**

1) ಹರಾಜಿನಲ್ಲಿ ಪಾಲ್ಗೊಳ್ಳಲು ಇಚ್ಛಿಯುಳ್ಳವರು ರೂ. 3000-00 ಮುಂಗಡ ಠೇವಣಿಯಾಗಿ ಹರಾಜಿನ ದಿನ ಬೆಳಿಗ್ಗೆ 10.00 ಗಂಟೆಯಿಂದ 11 ಗಂಟೆಯೊಳಗೆ ಕಟ್ಟಬೇಕು.
2) ಯಶಸ್ವಿ ಬಿಡ್‌ದಾರರು ಮಾರಾಟ ತೆರಿಗೆಯನ್ನು ನಿಯಮದಂತೆ ಪಾವತಿ ಮಾಡತಕ್ಕದ್ದು.
3) ಹರಾಜಿಗೆ ಇಟ್ಟ ವಸ್ತುಗಳನ್ನು ಜಂಟಿ ಕೃಷಿ ನಿರ್ದೇಶಕರು, ಚಿತ್ರದುರ್ಗ ಕಛೇರಿಯಲ್ಲಿ ಕಛೇರಿಯ ದಿನಗಳಂದು ನೋಡಬಹುದಾಗಿದೆ.
4) ಹೆಚ್ಚಿನ ಹರಾಜು ನಿರ್ಣಯವನ್ನು ಅತ್ಯುನ್ನತ ಹರಾಜು ಬೆಲೆಯ ಮೇಲೆ ನಿರ್ಣಯಿಸಲಾಗುವುದು.
5) ಹರಾಜಿನ ಪ್ರಕಟಣೆಯಲ್ಲಿ ಯಾವುದೇ ವಿವಾದವಾದ ಪಕ್ಷದಲ್ಲಿ ಹರಾಜನ್ನು ತಿರಸ್ಕರಿಸುವ ಮುಂದುವರೆಸುವ ಹಾಗು ರದ್ದುಪಡಿಸುವ ಹಕ್ಕುಗಳು ಜಂಟಿ ಕೃಷಿ ನಿರ್ದೇಶಕರು, ಚಿತ್ರದುರ್ಗ ಇವರಿಗೆ ಇರುತ್ತದೆ.
6) ಹರಾಜಿನ ಎಲ್ಲಾ ವಿಷಯಗಳಲ್ಲಿ ಜಂಟಿ ಕೃಷಿ ನಿರ್ದೇಶಕರು, ಚಿತ್ರದುರ್ಗ ಇವರ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ. ಮತ್ತು ಭಾಗವಹಿಸುವ ಹರಾಜಿನ ಬಿಡ್‌ದಾರರು ಈ ತೀರ್ಮಾನಕ್ಕೆ ಬದ್ಧರಾಗಿರಬೇಕಾಗಿರುತ್ತದೆ.
7) ಹರಾಜಿಗೆ ಸಂಬಂಧಿಸಿದಂತೆ ಕೃಷಿ ಆಯುಕ್ತರು, ಬೆಂಗಳೂರು ಇವರ ಅನುಮೋದನೆ ಪಡೆದ ನಂತರ ಹೆಚ್ಚು ಬಿಡ್ ಮಾಡಿದ ಹರಾಜುದಾರರು ನಿಗದಿತ 7 ದಿನಗಳೊಳಗಾಗಿ ಪೂರ್ತಿ ಹಣವನ್ನು ತೆರಿಗೆ ಸಹಿತ ನಗದು ರೂಪದಲ್ಲಿ ಪಾವತಿ ಮಾಡಿ ವಸ್ತುಗಳನ್ನು ಅವರ ಸ್ವಂತ ಖರ್ಚಿನಲ್ಲಿ ಹರಾಜಿನ ಸ್ಥಳದಿಂದ ತೆಗೆದುಕೊಂಡು ಹೋಗತಕ್ಕದ್ದು. ಯಾವ ಕಾರಣದಿಂದಲೂ ಈ ಅವಧಿಯನ್ನು ವಿಸ್ತರಿಸಲಾಗುವುದಿಲ್ಲ. ಈ ನಿಯಮವನ್ನು ಪಾಲಿಸದಿದ್ದಲ್ಲಿ ಅವರ ಮುಂಗಡ ಠೇವಣಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
8) ಜಯಶೀಲರಾದ ಹರಾಜುದಾರರನ್ನುಳಿದು ಉಳಿದ ಬಿಡ್‌ದಾರರ ಮುಂಗಡ ಠೇವಣಿಯನ್ನು ಹರಾಜಿನ ಅನಂತರ ಹಿಂದಿರುಗಿಸಲಾಗುವುದು.

ಜಂಟಿ ಕೃಷಿ ನಿರ್ದೇಶಕರು,
ಚಿತ್ರದುರ್ಗ.

ಪಿ.ಆರ್. 362

## ಪೊಲೀಸ್ ಅಧೀಕ್ಷಕರವರ ಕಾರ್ಯಾಲಯ ಬಾಗಲಕೋಟೆ

**ಟೆಂಡರ್ ಕಮ್ ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ:ಎಮ್.ಟಿ/233/2005-06, ದಿನಾಂಕ: 17ನೇ ಜೂನ್ 2006**

**ವಿಷಯ:** ಬಾಗಲಕೋಟೆ ಜಿಲ್ಲೆಯ ನಿರುಪಯುಕ್ತಗೊಳಿಸಿದ ಪೋಲೀಸ್ ವಾಹನಗಳ ಟೆಂಡರ್ ಕಂ ಬಹಿರಂಗ ಹರಾಜು ಮಾಡುವ ಕುರಿತು.

**ಉಲ್ಲೇಖ:** 1. ಸರ್ಕಾರ ಆದೇಶ ಸಂಖ್ಯೆ: ಎಫ್.ಡಿ.:6:ಟಿಸಿಇ:87 ದಿನಾಂಕ:15.12.1992
2. ಪ್ರಧಾನ ಕಛೇರಿ, ಬೆಂಗಳೂರು ರವರ ಆದೇಶ ಸಂಖ್ಯೆ:ವಾಸಾ: (1):11:06-07 ದಿನಾಂಕ:30.05.06.
3. ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ:03:ಇಎಮ್‌ವ್ಹಿ :2004 ಬೆಂಗಳೂರು, ದಿನಾಂಕ:12.5.2005

ಈ ಮೂಲಕ ಸಾರ್ವಜನಿಕರ ತಿಳಿಯಪಡಿಸುವುದೇನೆಂದರೆ, ಬಾಗಲಕೋಟೆ ಜಿಲ್ಲೆಯ ಈ ಕೆಳಕಂಡ ವಿವಿಧ ನಮೂನೆಯ ನಿರುಪಯುಕ್ತ ಪೊಲೀಸ್ ವಾಹನಗಳನ್ನು ದಿನಾಂಕ:08.08.2006 ರಂದು ಬೆಳಿಗ್ಗೆ 11.00 ಗಂಟೆಗೆ ಬಾಗಲಕೋಟೆ ಜಿಲ್ಲಾ ಸಶಸ್ತ್ರ ಮಿಸಲು ಪಡೆಯ ಆವರಣ, (ನವನಗರ) ದಲ್ಲಿ ಯಥಾಸ್ಥಿತಿಯಲ್ಲಿ ಬಹಿರಂಗ ಹರಾಜು ಮಾಡಲಾಗುವುದು. ವಾಹನಗಳನ್ನು ಖರೀದಿಸುವ ಆಸಕ್ತಿಯುಳ್ಳವರು ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ನಿರುಪಯುಕ್ತಗೊಳಿಸಿದ ವಾಹನಗಳನ್ನು ಖರೀದಿಸಬಹುದಾಗಿರುತ್ತದೆ.

**ಹರಾಜು ಮಾಡಲಾಗುವ ನಿರುಪಯುಕ್ತ ಪೊಲೀಸ್ ವಾಹನಗಳ ವಿವರ ಈ ಕೆಳಗಿನಂತಿರುತ್ತದೆ.**

| ಕ್ರ. ಸಂ. | ವಾಹನದ ಸಂಖ್ಯೆ | ನಮೂನೆ | ಮಾದರಿ |
|---|---|---|---|
| 1. | ಸಿಎಜಿ-3240 | ಮಹೇಂದ್ರಾ ಮಹೇಂದ್ರಾ ಜೀಪು | 1982 |
| 2. | ಸಿಎಜಿ-3209 | ರಾಯಲ್ ಎನ್‌ಫಿಲ್ಡ್ ಮೋಟಾರ ಸೈಕಲ್ | 1981 |

| ಕ್ರ. ಸಂ. | ವಾಹನದ ಸಂಖ್ಯೆ | ನಮೂನೆ | ಮಾದರಿ |
|---|---|---|---|
| 3. | ಸಿಎಜಿ-3212 | ರಾಯಲ್ ಎನ್‌ಫಿಲ್ಡ್ ಮೋಟಾರ್ ಸೈಕಲ್ | 1981 |
| 4. | ಸಿಎಜಿ-3216 | ರಾಯಲ್ ಎನ್‌ಫಿಲ್ಡ್ ಮೋಟಾರ ಸೈಕಲ್ | 1981 |
| 5. | ಸಿಎಜಿ-3234 | ರಾಯಲ್ ಎನ್‌ಫಿಲ್ಡ್ ಮೋಟಾರ ಸೈಕಲ್ | 1982 |
| 6. | ಸಿಎಜಿ-3236 | ರಾಯಲ್ ಎನ್‌ಫಿಲ್ಡ್ ಮೋಟಾರ ಸೈಕಲ್ | 1982 |
| 7. | ಸಿಎಜಿ-3270 | ರಾಯಲ್ ಎನ್‌ಫಿಲ್ಡ್ ಮೋಟಾರ ಸೈಕಲ್ | 1984 |

ಮೇಲ್ಕಂಡ ನಿರುಪಯುಕ್ತ ಮೋಟಾರು ವಾಹನಗಳನ್ನು ಸಾರ್ವಜನಿಕರ ವೀಕ್ಷಣೆ/ಪರಿಶೀಲನೆಗಾಗಿ ಮೋಟಾರು ವಾಹನ ವಿಭಾಗ ಡಿ.ಎ.ಆರ್. ಬಾಗಲಕೋಟೆ ಕಛೇರಿ ಆವರಣದಲ್ಲಿ ನಿಲ್ಲಿಸಿದ್ದು, ಸಾರ್ವಜನಿಕರು ಎಲ್ಲಾ ಕೆಲಸದ ದಿನಗಳ ಕಛೇರಿ ವೇಳೆಯಲ್ಲಿ ವೀಕ್ಷಿಸಬಹುದು.

ಪೂರ್ಣವಾಗಿ ಭರ್ತಿ ಮಾಡಿದ ಟೆಂಡರ್ ಫಾರ್ಮಗಳನ್ನು ದಿನಾಂಕ:4.8.2006 ರಂದು ಸಾಯಂಕಾಲ 5.00 ಗಂಟೆಯೊಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸಬೇಕು. ನಂತರ ಬಂದ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.

**ಷರತ್ತು ಮತ್ತು ನಿಬಂಧನೆಗಳು**

1) ಬಾಗಲಕೋಟೆ ಜಿಲ್ಲೆಯ ನಿರುಪಯುಕ್ತ ಪೊಲೀಸ್ ವಾಹನಗಳನ್ನು ಖರೀದಿಸಲು ಇಚ್ಛಿಸುವ ಬಿಡ್‌ದಾರರ ವಾಹನವೊಂದಕ್ಕೆ ರೂ. 1000-00 (ರೂಪಾಯಿ ಒಂದು ಸಾವಿರಗಳನ್ನು) ಠೇವಣಿ ಅಂತಾ ಬಹಿರಂಗ ಹರಾಜಿನಲ್ಲಿ ಭಾಗವಹಿಸುವುದಕ್ಕಿಂತ ಮುಂಚಿತವಾಗಿ ನಗದಾಗಿ ಪಾವತಿಸತಕ್ಕದ್ದು. ಅದನ್ನು ಕಟ್ಟದೆ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಅವಕಾಶ ಇರುವುದಿಲ್ಲ. ಹರಾಜಿನಲ್ಲಿ ಯಶಸ್ವಿಯಾಗುವ ಬಿಡ್ ದಾರರ ಠೇವಣಿಯನ್ನು ಹರಾಜು ಮುಗಿದ ತಕ್ಷಣ ಹಿಂದಿರುಗಿಸಲಾಗುವುದು.
2) ನಿರುಪಯುಕ್ತ ವಾಹನಗಳು ಜಿಲ್ಲಾ ಸಶಸ್ತ್ರ ಮೀಸಲು ಪಡೆ. ಬಾಗಲಕೋಟೆ (ನವನಗರ) ಆವರಣದಲ್ಲಿ ಇರುತ್ತವೆ. ಅದು ಹಾಲಿ ಯಾವ ಸ್ಥಿತಿಯಲ್ಲಿರುತ್ತವೆಯೋ ಅದೇ ಸ್ಥಿತಿಯಲ್ಲಿ ಬಹಿರಂಗ ಹರಾಜು ಮೂಲಕ ಯಶಸ್ವಿ ಬಿಡ್‌ದಾರರಿಗೆ ನೀಡಲಾಗುವುದು
3) ಬಹಿರಂಗ ಹರಾಜಿನಲ್ಲಿ ಆದ ಹೆಚ್ಚಿನ ಮೊತ್ತದ ಬಿಡ್ಡನ್ನು ದಾಖಲು ಮಾಡಲಾಗಿರುತ್ತದೆ. ಸವಾಲುದಾರರ ಧಾರಣೆ ಪಟ್ಟಿಗಳನ್ನು ಒಪ್ಪಿಕೊಳ್ಳಲು ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರಿಗೆ ಪ್ರಸ್ತಾವನೆ ಸಲ್ಲಿಸಲಾಗುವುದು. ಅವರ ಒಪ್ಪಿಗೆ ಬಂದ ನಂತರ ನಿರುಪಯುಕ್ತ ವಾಹನ ತೆಗೆದುಕೊಂಡು ಹೋಗಲು ತಿಳಿಸಲಾಗುವುದು.
4) ಯಶಸ್ವಿಯಾದ ಬಿಡ್‌ದಾರರು ಅಂಗೀಕೃತ ಹೆಚ್ಚಿನ ಬೆಲೆಯ ಶೇಕಡಾ 25 ರಷ್ಟು (ಠೇವಣಿ ಬಿಟ್ಟು) ಹಣವನ್ನು ಹರಾಜಿನ ಸ್ಥಳದಲ್ಲಿ ಅದೇ ದಿನವೇ ತುಂಬತಕ್ಕದ್ದು. ಈ ಹಣಕ್ಕೆ ಯಾವುದೇ ಬಡ್ಡಿಯನ್ನು ನೀಡಲಾಗುವುದಿಲ್ಲ ಮತ್ತು ಒಂದು ವೇಳೆ ಶೇಕಡಾ 25 ರಷ್ಟು ಪ್ರತಿಶತ ಹಣ ಭರಿಸಲು ವಿಫಲರಾದಲ್ಲಿ ಇ.ಎಂ.ಡಿ. ಹಣ ರೂ. 1,000-00 ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
5) ಠೇವಣಿ ತುಂಬಿದ ಬಿಡ್‌ದಾರರು ತುಂಬಬೇಕಾದ ಒಟ್ಟು ಮೊತ್ತದಲ್ಲಿ ಜಮಾ ತೆಗೆದುಕೊಂಡು ಉಳಿದ ಹಣವನ್ನು ತುಂಬಲು ತಿಳಿಸಲಾಗುವುದು. ನಿರುಪಯುಕ್ತ ವಾಹನ ತಮ್ಮ ಸ್ವಂತ ಖರ್ಚಿನಲ್ಲಿ ತೆಗೆದುಕೊಂಡು ಹೋಗಬೇಕಾಗಿರುತ್ತದೆ.
6) ಯಶಸ್ವಿ ಬಿಡ್‌ದಾರನು ಎಲ್ಲ ಹಣವನ್ನು ಪೊಲೀಸ್ ಅಧೀಕ್ಷಕರ ಕಛೇರಿ ಬಾಗಲಕೋಟೆ ನಗದು ಶಾಖೆಯಲ್ಲಿ ನಗದಾಗಿ ತುಂಬುವುದು. ಡ್ರಾಫ್ಟ್ ಚೆಕ್ ಮುಂತಾದವುಗಳ ಮೂಲಕ ತುಂಬಿದ ಹಣವನ್ನು ಸ್ವೀಕರಿಸಲಾಗುವುದಿಲ್ಲ.
7) ನಿರುಪಯುಕ್ತ ವಾಹನಕ್ಕೆ ಚಾಲ್ತಿಯಲ್ಲಿರುವ ಕರ್ನಾಟಕ ಸುಮೌಲ್ಯ ತೆರಿಗೆ ಕಾಯ್ದ 2003 ರ ರೀತ್ಯ ತೆರಿಗೆ ವಿಧಿಸಲಾಗುವುದು.
8) ಹರಾಜಿನಲ್ಲಿ ಯಾವುದೇ ಬಿಡ್‌ನ್ನು ಯಾವುದೇ ಕಾರಣಕ್ಕಾಗಿ ರದ್ದು ಮಾಡುವ ಇಲ್ಲವೇ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು ಬಾಗಲಕೋಟೆ ಜಿಲ್ಲೆ ಬಾಗಲಕೋಟೆರವರು ಹೊಂದಿರುತ್ತಾರೆ. ಹಾಗೂ ಅವರ ತೀರ್ಮಾನವೇ ಅಂತಿಮವಾದುದು. ಈ ನಿರ್ಣಯದ ಮೇಲೆ ಮೇಲ್ಮನವಿ ಮುಂತಾದವುಗಳು ಇರುವುದಿಲ್ಲ.
9) ಮೇಲೆ ತಿಳಿಸಿರುವ ಹರಾಜಿನ ವಿಷಯದಲ್ಲಿ ಯಾವುದೇ ತಕರಾರು ಉಂಟಾದಲ್ಲಿ ರದ್ದುಪಡಿಸುವ ತಿರಸ್ಕರಿಸುವ ಅಧಿಕಾರವನ್ನು ಜಿಲ್ಲಾ ಪೊಲೀಸ್ ಅಧಿಕಾರಿಗಳು ಬಾಗಲಕೋಟೆ ಇವರು ನೀಡುವ ನಿರ್ಣಯವೆ ಅಂತಿಮವಾಗಿರುತ್ತದೆ.
10) ಹೆಚ್ಚಿನ ಮಾಹಿತಿ ಬೇಕಾದಲ್ಲಿ ಜಿಲ್ಲಾ ಪೊಲೀಸ್ ಅಧಿಕಾರಿಗಳು, ಬಾಗಲಕೋಟೆ (ನವನಗರ) ಇವರಲ್ಲಿ ವಿಚಾರಿಸಬಹುದು.

ಪೊಲೀಸ್ ಅಧೀಕ್ಷಕರು,
ಬಾಗಲಕೋಟೆ.

ಪಿ.ಆರ್. 365

## ಪೊಲೀಸ್ ಅಧೀಕ್ಷಕರವರ ಕಾರ್ಯಾಲಯ ಬಾಗಲಕೋಟೆ

### ಟೆಂಡರ್ ಕಮ್ ಬಹಿರಂಗ ಹರಾಜು ಪ್ರಕಟಣೆ

**ನಂ/ ಎಮ್.ಟಿ.:ಬಿ.ಭಾ: ಹರಾಜು:750/ 2005-06, ದಿನಾಂಕ: 20ನೇ ಜೂನ್ 2006**

**ವಿಷಯ:** ಪೊಲೀಸ್ ವಾಹನಗಳ 2004-05ನೇ ಸಾಲಿನ ಹಳೆಯ ನಿರುಪಯುಕ್ತಗೊಳಿಸಿದ ಟಾಯರ್ ಟ್ಯೂಬ್, ಬ್ಯಾಟರಿ ಮತ್ತು ಇತರೆ ಬಿಡಿಭಾಗಗಳು ಟೆಂಡರ್ ಕಮ್ ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರಿ ಆದೇಶ ಸಂಖ್ಯೆ: ಎಚ್.ಡಿ.:198ಇಎಮ್‌ವಿ: 2000, ಬೆಂಗಳೂರು ದಿನಾಂಕ:19.6.03
2. ಪ್ರಧಾನ ಕಛೇರಿ, ಹಿಂಬರಹ ಸಂಖ್ಯೆ:ವಾಸಾ: (3):1:97-98 ದಿನಾಂಕ:17.07.03.

ಮೇಲಿನ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ಘಟಕದ ಪೊಲೀಸ್ ವಾಹನಗಳ ನಿರುಯುಕ್ತ ಟಾಯರ್, ಟ್ಯೂಬ್, ಬ್ಯಾಟರಿ ಬಿಡಿಭಾಗಗಳು ಬಾಗಲಕೋಟ ಜಿಲ್ಲಾ ಸಶಸ್ತ್ರ ಮಿಸಲು ಪಡೆಯ ಆವರಣದಲ್ಲಿ ದಿ: 08.08.2006 ರಂದು ಬೆಳಿಗ್ಗೆ 11.00 ಗಂಟೆಗೆ ಹರಾಜು ಮಾಡಲಾಗುವುದು.

**ಹಳೆಯ ಟಾಯರ್, ಟ್ಯೂಬ್, ಬ್ಯಾಟರಿಗಳ ವಿವರ**

| ಅ.ನಂ. | ಟಾಯರ್‌ಗಳ ಸೈಜ್ | ಒಟ್ಟು | ಅ.ನಂ. | ಬ್ಯಾಟರಿಗಳ ಸೈಜ್ | |
|---|---|---|---|---|---|
| 1 | 600 16 | 80 | 1 | 12 ವೋಲ್ಟ & 13 ಪ್ಲೇಟ್ಸ | 28 |
| 2 | 325 19 | 01 | 2 | 12 ವೋಲ್ಟ & 11 ಪ್ಲೇಟ್ಸ | 01 |
| 3 | 2.5 ಆರ್-14 ಸಿ | 05 | 3 | 06 ವೋಲ್ಟ & 07 ಪ್ಲೇಟ್ಸ | 02 |
| 4 | 7.50 16 | 05 | 4 | 12 ವೋಲ್ಟ & 07 ಪ್ಲೇಟ್ಸ | 02 |
| 5 | 6.70 16 | 05 | | **ಒಟ್ಟು** | **33** |
| | **ಒಟ್ಟು** | **96** | | | |
| | ಕಬ್ಬಿಣದ ಬಿಡಿ ಭಾಗಗಳು | | 05 ಕ್ವಿಂಟಲ್ | | |

**ಟೆಂಡರ್/ ಬಹಿರಂಗ ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1) ನಿರುಪಯುಕ್ತ ಟೈರ್, ಬ್ಯಾಟರಿ ಮತ್ತು ಬಿಡಿಭಾಗಗಳು ಯಾವ ಸ್ಥಿತಿಯಲ್ಲಿವೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.

2) ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸುವ ಮುನ್ನ ನಗದು ರೂಪದಲ್ಲಿ 5,000=00 ಗಳ ಠೇವಣಿಯನ್ನು ಕಛೇರಿಯಲ್ಲಿ ಪಾವತಿಸತಕ್ಕದ್ದು. ಠೇವಣಿ ಕಟ್ಟದೇ ಹರಾಜಿನಲ್ಲಿ ಭಾಗವಹಿಸುವಂತಿಲ್ಲ.

3) ಆಸಕ್ತ ಬಿಡ್‌ದಾರರು ಮುಚ್ಚಿದ ಲಕೋಟೆಯಲ್ಲಿ ಟೆಂಡರನ್ನು ಸಲ್ಲಿಸತಕ್ಕದ್ದು. "ವಾಹನದ ನಿರುಪಯುಕ್ತ ಬಿಡಿಭಾಗಗಳು, ಟೈರ್, ಟ್ಯೂಬ್, ಮತ್ತು ಬ್ಯಾಟರಿಗಳನ್ನು ಖರೀದಿಸುವ ಬಗ್ಗೆ" ಎಂದು ಲಕೋಟೆಯ ಮೇಲೆ ಬಿಡಿ ಅಕ್ಷರಗಳಲ್ಲಿ ನಮೂದಿಸಿ ಜಿಲ್ಲಾ ಪೋಲಿಸ್ ಅಧೀಕ್ಷಕರು ಬಾಗಲಕೋಟೆ ರವರ ಕಛೇರಿಯಲ್ಲಿ ಖುದ್ದಾಗಿ ಸಲ್ಲಿಸತಕ್ಕದ್ದು.

4) ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು ದಿನಾಂಕ:03.08.2006 ರಂದು ಸಂಜೆ 5.00 ಗಂಟೆಯೊಳಗಾಗಿ ಈ ಕಛೇರಿಗೆ ತಲುಪುವಂತೆ ಕಳುಹಿಸಬೇಕು. ತಡವಾಗಿ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

5) ಟೆಂಡರ್ ಫಾರಂನಲ್ಲಿ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿ ಇದ್ದರೆ ಆ ಸ್ಥಳದಲ್ಲಿಯೇ ಟೆಂಡರ್‌ದಾರರು ಪೂರ್ಣ ಸಹಿ ಮಾಡತಕ್ಕದ್ದು

6) ಟೆಂಡರ್ ಸಲ್ಲಿಸಿದ ಬಿಡ್‌ದಾರರಿಂದ ಅಥವಾ ಠೇವಣಿ ತುಂಬಿದ ಬಿಡ್‌ದಾರರಿಂದ ಹರಾಜು ನಡೆಯುವ ದಿನದಂದು ಬಹಿರಂಗ ಬಿಡ್‌ಗಳನ್ನು ಪಡೆಯಲಾಗುವುದು.

7) ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬಿಡ್ ದರವನ್ನು ದಾಖಲಿಸಿಕೊಳ್ಳಲಾಗುತ್ತದೆ. ಯಾರು ಅತಿ ಹೆಚ್ಚಿನ ದರವನ್ನು ಸೂಚಿಸುವರೋ ಅವರನ್ನು ಯಶಸ್ವಿ ಬಿಡ್ ದಾರರೆಂದು ಪರಿಗಣಿಸಲಾಗುವುದು.

8) ನಿರುಪಯುಕ್ತ ವಾಹನ ಬಿಡಿಭಾಗಗಳ ಟೈರ್, ಟ್ಯೂಬ್ ಮತ್ತು ಬ್ಯಾಟರಿಗಳ ಮೇಲೆ ನಿಯಮದ ಪ್ರಕಾರ ಚಾಲ್ತಿಯಲ್ಲಿರುವ ತೆರಿಗೆಯನ್ನು ವಿಧಿಸಲಾಗುವುದು.

9) ಹರಾಜು ಮುಗಿದ ತಕ್ಷಣವೇ ಯಶಸ್ವಿಯಾಗದ ಬಿಡ್‌ದಾರರ ಠೇವಣಿಯನ್ನು ಸ್ಥಳದಲ್ಲಿಯೇ ಹಿಂದಿರುಗಿಸಲಾಗುವುದು.

10) ಯಶಸ್ವಿಯಾದ ಬಿಡ್‌ದಾರರು/ ಟೆಂಡರ್‌ದಾರರು ಹರಾಜಿನ ಒಟ್ಟು ಶೇಕಡಾ 25 ರಷ್ಟು ಮೊತ್ತವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ನಗದು ರೂಪದಲ್ಲಿ ಹರಾಜಿನ ದಿನವೇ ಪಾವತಿಸಬೇಕು. ಡಿ.ಡಿ. ಮತ್ತು ಚೆಕ್ ಮುಖಾಂತರ ತುಂಬಿದ ಹಣವನ್ನು ಸ್ವೀಕರಿಸಲಾಗುವುದಿಲ್ಲ.

11) ಮೇಲ್ಕಂಡ ಟೆಂಡರ್/ಹರಾಜಿನ ಸಂಬಂಧದಲ್ಲಿ ಯಾವುದೇ ವಾದ ವಿವಾದಗಳು ಉದ್ಭವಿಸಿದಲ್ಲಿ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ ಇವರು ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.

12) ಯಶಸ್ವಿಯಾದ ಬಿಡ್‌ದಾರರು 7 ದಿನಗಳೊಳಗಾಗಿ ಸಾಮಾಗ್ರಿಗಳನ್ನು ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು.

13) ಹರಾಜಿನ ಯಾವುದೇ ಟೆಂಡರ್ /ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಪಡಿಸುವ /ತಿರಸ್ಕರಿಸುವ ಅಧಿಕಾರವನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ ಇವರು ಹೊಂದಿರುತ್ತಾರೆ. ಇವರ ತೀರ್ಮಾನವೇ ಅಂತಿಮವಾದುದು.

14) ಯಶಸ್ವಿಯಾದ ಬಿಡ್‌ದಾರರ ವಿವಾದ ಉಂಟಾಗಿ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ, ಅಂತಹ ಟೆಂಡರ್/ ಸವಾಲುದಾರರು ಮುಂಗಡವಾಗಿ ಕಟ್ಟಲಾದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಮತ್ತು ಅಂತಹವರ ವಿರುದ್ಧ ಕಾನೂನು ಬದ್ಧವಾಗಿ ಕ್ರಮ ಕೈಗೊಳ್ಳಲಾಗುವುದು.

15) ನಿರುಪಯುಕ್ತ ವಾಹನ ಬಿಡಿಭಾಗಗಳನ್ನು ಟೈರ್, ಟ್ಯೂಬ್ ಮತ್ತು ಬ್ಯಾಟರಿಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆಯವರ ಕಛೇರಿಯ ಆವರಣದಲ್ಲಿ ಪರಶೀಲನೆಗಾಗಿ ಇಡಲಾಗಿದೆ ಇಚ್ಛೆಯುಳ್ಳವರು ವೀಕ್ಷಿಸಬಹುದು. ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಪರಿಶೀಲನೆ ಮಾಡಿ ಹರಾಜಿನಲ್ಲಿ ಭಾಗವಹಿಸಬಹುದು.

ಪೊಲೀಸ್ ಅಧೀಕ್ಷಕರು,
ಬಾಗಲಕೋಟೆ.

ಪಿ.ಆರ್. 366

## ಕರ್ನಾಟಕ ಮೃಗಾಲಯ ಪ್ರಾಧಿಕಾರ
## ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83
## ಸಂಕ್ಷಿಪ್ತ ಅಲ್ಪಾವಧಿ ಟೆಂಡರು ಪ್ರಕಟಣೆ
### ಸಂಖ್ಯೆ:ಎ1/ ಬಬಪಾ/ ವಾನಿ.ಶುಲ್ಕ/ ಜಿಎಲ್-1/ 2006-2007, ದಿನಾಂಕ:26ನೇ ಜೂನ್, 2006

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 2006-2007ನೇ ಸಾಲಿಗೆ ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕಿನ ವಾಹನ ನಿಲ್ದಾಣದಲ್ಲಿ ಪ್ರವಾಸಿಗರ ವಾಹನಗಳನ್ನು ನಿಲ್ಲಿಸಲು ಮೃಗಾಲಯ ಪ್ರಾಧಿಕಾರವು ನಿಗದಿಪಡಿಸಿದ ದರದಲ್ಲಿ ವಾಹನ ನಿಲ್ದಾಣದ ಶುಲ್ಕ ಸಂಗ್ರಹಿಸಲು ಟೆಂಡರುಗಳನ್ನು ಆಹ್ವಾನಿಸಲಾಗಿದೆ.

ಸದರಿ ಟೆಂಡರಿನಲ್ಲಿ ಭಾಗವಹಿಸುವವರು ಟೆಂಡರು ಅರ್ಜಿಯನ್ನು ಮೊಹರು ಮಾಡಿದ ಲಕೋಟೆಯಲ್ಲಿ ಈ ಕಛೇರಿಗೆ ದಿನಾಂಕ:12.07.2006ರಂದು ಮಧ್ಯಾಹ್ನ 3.00 ಗಂಟೆ ಒಳಗಾಗಿ ಈ ಕೆಳ ಸಹಿ ಮಾಡಿರುವವರ ಕಛೇರಿಯಲ್ಲಿ ಸಲ್ಲಿಸಲು ತಿಳಿಸಲಾಗಿದೆ.

**ಷರತ್ತುಗಳು:**

1. ಗುತ್ತಿಗೆದಾರರು ರೂ.2.00 ಲಕ್ಷ (ಎರಡು ಲಕ್ಷ ರೂ.ಗಳು ಮಾತ್ರ) ಅನ್ನು ಠೇವಣಿಯಾಗಿ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಟೆಂಡರಿನೊಂದಿಗೆ ಈ ಕೆಳಗೆ ಸಹಿದಾರರ ಪದನಾಮದ ಹೆಸರಿನಲ್ಲಿ ಸಲ್ಲಿಸತಕ್ಕದ್ದು.
2. ಟೆಂಡರಿನಲ್ಲಿ ಭಾಗವಹಿಸುವವರು ತಮ್ಮ ವಿಳಾಸ ದಾಖಲೆ ತೋರಿಸಿ ರೂ.563/-ಗಳನ್ನು (ತೆರಿಗೆ ಸಹಿತ) ಪಾವತಿಸಿ ಟೆಂಡರು ಫಾರಂನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ದಿನಾಂಕ:05.07.2006ರಿಂದ 10.07.2006ರ ಸಂಜೆ 5.00 ಗಂಟೆಯೊಳಗೆ ಪಡೆಯಬಹುದಾಗಿರುತ್ತದೆ.
3. ಟೆಂಡರ್ ಅನ್ನು ದಿನಾಂಕ: 12.07.2006ರಂದು ಸಂಜೆ 4.00 ಗಂಟೆಗೆ ಈ ಕೆಳಸಹಿದಾರರ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಿಮದ ತೆರೆಯಲಾಗುವುದು.
4. ಇನ್ನು ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದಾಗಿರುತ್ತದೆ.

ಕಾರ್ಯನಿರ್ವಾಹಕ ನಿರ್ದೇಶಕರು ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬನ್ನೇರುಘಟ್ಟ
ಬಯಲಾಜಿಕಲ್ ಪಾರ್ಕ್, ಬೆಂಗಳೂರು-83.

## ZOO AUTHORITY OF KARNATAKA
## OFFICE OF THE EXECUTIVE DIRECTOR, BANNERGHATTA BIOLOGICAL PARK, BANGALORE-83
## BRIEF SHORT TERM TENDER NOTIFICATION
### No.A2-BBP-VP-GL-1/ 2006-2007, Dated: 26th June, 2006

It is hereby notified for the general information of the public that sealed tenders are invited and will be received by the Executive Director, Bannerghatta Biological Park Bangalore or any other officer duly authorized by him, for "License to operate the Vehicle Parking Stand at Bannerghatta Biological Park for one year".

**Conditions:**

- The prescribed blank tender documents will be issued by the office of the undersigned from 05.07.2006 to 10.07.2006 on payment of Rs.563/- including taxes on production of address proof, during office hours on working days.
- The tender should be accompanied with an EMD of Rs.2.00 lakhs (Rupees Two lakhs only) which shall be in the form of DD from nationalized banks and should be in the favour of the Executive Director, Bannerghatta Biological Park, Bangalore-83.
- The completed tender doucments will be received till 3.00 PM on 12.07.2006 and the same will be opened at 4.00 PM on the same day.
- For further information/ clarification, if any, the intending applicants may contact the above mentioned office at office hours (Tuesdays Holiday).

Executive Director,
Deputy Conservator of Forests,
Bannerghatta Biological Park,
Bangalore-560 083.

PD-71

## ಕಮಾಂಡಂಟ್‌ರವರ ಕಛೇರಿ 9ನೇ ಪಡೆ, ಕೆಎಸ್‌ಆರ್‌ಪಿ, ನಂ.60, ರಿಚ್‌ಮಂಡ್ ರಸ್ತೆ, ಬೆಂಗಳೂರು-560 025
## ಟೆಂಡರ್ ಕಂ ಹರಾಜು ಪ್ರಕಟಣೆ
### ಸಂಖ್ಯೆ:ಸಂಗ್ರಹ/ ಅನುಪಯುಕ್ತ/ 17/ 2006-2007, ದಿನಾಂಕ:26ನೇ ಜೂನ್, 2006

**ವಿಷಯ:** ಅನುಪಯುಕ್ತ ಸಾಧನ ಸಾಮಗ್ರಿಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** ಎ.ಡಿ.ಜಿ.ಪಿ. ಕೆ.ಎಸ್.ಆರ್.ಪಿ. ಜ್ಞಾಪನ ಪತ್ರ ಸಂಖ್ಯೆ: 67: ಸಂಗ್ರಹ: 2001-02, ದಿನಾಂಕ:22.06.2006.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಕಂಡ ಅನುಪಯುಕ್ತ (ಉಪಯೋಗಿಸಿ ಹಳೆಯದಾದ) ವಸ್ತುಗಳನ್ನು 9ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು-25, ಇಲ್ಲಿ ದಿನಾಂಕ: 07.08.2006ರಂದು ಸಮಯ ಬೆಳಿಗ್ಗೆ 10.00 ಗಂಟೆಗೆ ಈ ಕೆಳಗಿನ ಷರತ್ತಿನ ಮೇಲೆ ಬಹಿರಂಗ ಹರಾಜು ಮಾಡಲಾಗುವುದು.

ಭಾಗ-1

| ಕ್ರಮ ಸಂಖ್ಯೆ | ವಸ್ತುಗಳ ವಿವರ | ಪರಿಮಾಣ |
|---|---|---|
| 1. | ಪಿಕಾಶಿ | 10 ಸಂಖ್ಯೆ |
| 2. | ಬಾಂಡ್ಲಿ | 10 ಸಂಖ್ಯೆ |
| 3. | ಶಾವಲ್ | 02 ಸಂಖ್ಯೆ |
| 4. | ಮಮಟಿ | 15+10=25 ಸಂಖ್ಯೆ |
| 5. | ಮಚ್ಚು | 04 ಸಂಖ್ಯೆ |
| 6. | ಪೈಲ್ ವುಡ್ | 01 ಸಂಖ್ಯೆ |
| 7. | ಡ್ರಿಲ್ ಬಿಟ್ | 01 ಸಂಖ್ಯೆ |
| 8. | ಕಟಿಂಗ್ ಪ್ಲೆಯರ್ | 01 ಸಂಖ್ಯೆ |
| 9. | ಸ್ಕ್ರೂ ಡ್ರೈವರ್ | 01 ಸಂಖ್ಯೆ |
| 10. | 111/2 ಪೈಲ್ ಸ್ಮೂತ್ | 01 ಸಂಖ್ಯೆ |
| 11. | ಪೈಲ್ ಪ್ಲಾಟ್ | 06 ಸಂಖ್ಯೆ |
| 12. | ಬೇಪ್ ಕಾರ್ನರ್ | 01 ಸಂಖ್ಯೆ |
| 13. | ಔಗರ್ | 01 ಸಂಖ್ಯೆ |
| 14. | ಪಿಂಚ್ | 01 ಸಂಖ್ಯೆ |
| 15. | ಹ್ಯಾಮರ್ | 02 ಸಂಖ್ಯೆ |
| 16. | ಟೀ ಬಿಟ್ | 02 ಸಂಖ್ಯೆ |
| 17. | ಟ್ರೇ ಕಾರ್ನರ್ | 02 ಸಂಖ್ಯೆ |
| 18. | ಬಿಟ್ ಪೈಲ್ | 03 ಸಂಖ್ಯೆ |
| 19. | ಟ್ರೇ ಸಾಲ್ 6 ಮತ್ತು 12 ಇಂಚು | 02 ಸಂಖ್ಯೆ |
| 20. | ಸಾ ಫೈಲ್ | 03 ಸಂಖ್ಯೆ |
| 21. | ಗಾಡಿ ಹುಳಿ | 04 ಸಂಖ್ಯೆ |
| 22. | ಜಾಕ್ ಪ್ಲೇನ್ | 01 ಸಂಖ್ಯೆ |
| 23. | 111/2 ಪೈಲ್ ರಫ್ | 01 ಸಂಖ್ಯೆ |
| 24. | ಸಾ | 01 ಸಂಖ್ಯೆ |
| 25. | ಸ್ಟೋನ್ | 01 ಸಂಖ್ಯೆ |
| 26. | ಉಳಿ 3, 1/2, 2 ಮತ್ತು 1/2 | 08 ಸಂಖ್ಯೆ |
| 27. | ಡ್ರಿಲ್ | 01 ಸಂಖ್ಯೆ |
| 28. | ರಂದಾ ಬ್ಲೇಡ್ | 03 ಸಂಖ್ಯೆ |
| 29. | ಚಿಸಲ್ | 17 ಸಂಖ್ಯೆ |
| 30. | ಆಕ್ಸ್‌ಸ್ ಪ್ರೇಮ್ | 01 ಸಂಖ್ಯೆ |
| 31. | ಐರನ್ ಪೆಗ್ಸ್ | 12 ಸಂಖ್ಯೆ |
| 32. | ಎತ್ತರ ಅಳತೆಮಾಪಕ | 01 ಸಂಖ್ಯೆ |
| 33. | ಸ್ಟ್ರೆಚರ್ | 16 ಸಂಖ್ಯೆ |
| 34. | ಜಿಂಕ್ ಬಕೆಟ್ | 22 ಸಂಖ್ಯೆ |
| 35. | ಕಬ್ಬಿಣದ ಹಂಚು | 04 ಸಂಖ್ಯೆ |
| 36. | ಕಫ್‌ಗೀರ್ 36 ಇಂಚು | 02 ಸಂಖ್ಯೆ |
| 37. | ಆಯಿಲ್ ಜಾರ್ | 02 ಸಂಖ್ಯೆ |
| 38. | ಎಸ್. ಮಾದರಿಯ ಕೈ ಇರುವ ಕುರ್ಚಿ | 14 ಸಂಖ್ಯೆ |
| 39. | ಎಸ್. ಮಾದರಿಯ ಕೈ ಇಲ್ಲದ ಕುರ್ಚಿ | 10 ಸಂಖ್ಯೆ |
| 40. | ಸಿಬ್ಬಂದಿ ಟೇಬಲ್ | 02 ಸಂಖ್ಯೆ |
| 41. | ಕುಡುಗೋಲು | 15 ಸಂಖ್ಯೆ |
| 42. | ಸೀಮೆಎಣ್ಣೆ ಸ್ಟೌವ್ | 02 ಸಂಖ್ಯೆ |
| 43. | ರಿವಾಲ್ವಿಂಗ್ ಛೇರ್ | 05 ಸಂಖ್ಯೆ |
| 44. | ರಿವಾಲ್ವಿಂಗ್ ಛೇರ್ ಸ್ಟ್ಯಾಂಡ್ | 02 ಸಂಖ್ಯೆ |
| 45. | ರಿವಾಲ್ವಿಂಗ್ ಛೇರ್ ಕುಶನ್ | 01 ಸಂಖ್ಯೆ |
| 46. | ಗೋದ್ರೆಜ್ ಸ್ಟೀಲ್ ಛೇರ್ | 19 ಸಂಖ್ಯೆ |

| ಕ್ರಮ ಸಂಖ್ಯೆ | ವಸ್ತುಗಳ ವಿವರ | ಪರಿಮಾಣ |
|---|---|---|
| 47. | ಗೋದ್ರೇಜ್ ಸ್ಟೂಲ್ | 01 ಸಂಖ್ಯೆ |
| 48. | ಟೇಬಲ್ ಲ್ಯಾಂಪ್ | 01 ಸಂಖ್ಯೆ |
| 49. | ಎಲಿಮಿನೇಟರ್ | 01 ಸಂಖ್ಯೆ |
| 50. | ಸೈಲೆಂಟ್ ಜನರೇಟರ್ | 01 ಸಂಖ್ಯೆ |
| 51. | ಐರನ್ ರಾಡ 6 ಅಡಿ | 01 ಸಂಖ್ಯೆ |
| 52. | ಟ್ಯೂಬ್ ಲೈಟ್ ಕವರ್ | 02 ಸಂಖ್ಯೆ |
| 53. | ಟೈಪ್ ರೈಟರ್ | 03 ಸಂಖ್ಯೆ |
| 54. | ಜಿಂಕ್ ಬಾಕ್ಸ್ | 01 ಸಂಖ್ಯೆ |

**ಭಾಗ-2**

| ಕ್ರಮ ಸಂಖ್ಯೆ | ವಸ್ತುಗಳ ವಿವರ | ಪರಿಮಾಣ |
|---|---|---|
| 1. | ಬ್ರಾಸೋ ಇಸ್ತ್ರಿ ಪೆಟ್ಟಿಗೆ | 04 ಸಂಖ್ಯೆ |
| 2. | ಬ್ಯುಗಿಲ್ ವಿತ್ ಕಾರ್ಡ್ | 03 ಸಂಖ್ಯೆ |
| 3. | ಡೋರ್ ಕ್ಲೋಸರ್ ಬ್ರಾಸೋ | 04 ಸಂಖ್ಯೆ |

**ಭಾಗ-3**

| ಕ್ರಮ ಸಂಖ್ಯೆ | ವಸ್ತುಗಳ ವಿವರ | ಪರಿಮಾಣ |
|---|---|---|
| 1. | ಅಲ್ಯುಮಿನಿಯಂ ಪಾತ್ರೆ ವಿತ್ ಲಿಡ್ 28 ಕೆ.ಜಿ. | 01 ಸಂಖ್ಯೆ |
| 2. | ಅಲ್ಯುಮಿನಿಯಂ ಟೀ ಕ್ಯಾಟಲ್ | 04 ಸಂಖ್ಯೆ |
| 3. | ಅಲ್ಯುಮಿನಿಯಂ ಮಿಲ್ಕ ಕ್ಯಾನ್ | 04 ಸಂಖ್ಯೆ |
| 4. | ಅಲ್ಯುಮಿನಿಯಂ ಪಾತ್ರೆ ವಿತ್ ಲಿಡ್ 8 ಕೆ.ಜಿ. | 02 ಸಂಖ್ಯೆ |
| 5. | ಅಲ್ಯುಮಿನಿಯಂ ಪಾತ್ರೆ ವಿತ್ ಲಿಡ್ $4^1/_2$ ಕೆ.ಜಿ. | 02 ಸಂಖ್ಯೆ |
| 6. | ಅಲ್ಯುಮಿನಿಯಂ ಸಂಬಾರ್ ಸ್ಪೂನ್ | 09 ಸಂಖ್ಯೆ |
| 7. | ಅಲ್ಯುಮಿನಿಯಂ ರೈಸ್ ಹ್ಯಾಂಡಲ್ | 18 ಸಂಖ್ಯೆ |
| 8. | ಅಲ್ಯುಮಿನಿಯಂ ಬಕೆಟ್ | 10 ಸಂಖ್ಯೆ |
| 9. | ಅಲ್ಯುಮಿನಿಯಂ ಪಾತ್ರೆ ವಿತ್ ಲಿಡ್ $7^1/_2$ ಕೆ.ಜಿ. | 03 ಸಂಖ್ಯೆ |
| 10. | ಅಲ್ಯುಮಿನಿಯಂ ಪಾತ್ರೆ ವಿತ್ ಲಿಡ್ $3^1/_2$ ಕೆ.ಜಿ. | 02 ಸಂಖ್ಯೆ |
| 11. | ಅಲ್ಯುಮಿನಿಯಂ 10 ಕೆ.ಜಿ. ಪಾತ್ರೆಯ ಲಿಡ್ | 05 ಸಂಖ್ಯೆ |
| 12. | ಅಲ್ಯುಮಿನಿಯಂ 8 ಕೆ.ಜಿ. ಪಾತ್ರೆಯ ಲಿಡ್ | 05 ಸಂಖ್ಯೆ |
| 13. | ಅಲ್ಯುಮಿನಿಯಂ 4 ಕೆ.ಜಿ. ಪಾತ್ರೆಯ ಲಿಡ್ | 12 ಸಂಖ್ಯೆ |
| 14. | ಅಲ್ಯುಮಿನಿಯಂ $3^1/_2$ ಕೆ.ಜಿ. ಪಾತ್ರೆಯ ಲಿಡ್ | 10 ಸಂಖ್ಯೆ |
| 15. | ಅಲ್ಯುಮಿನಿಯಂ ಬಿಡಿಂಗ್ | |
| 16. | ಅಲ್ಯುಮಿನಿಯಂ ಪಾರ್ಟೀಷನ್ ಆ್ಯಂಗಲ್ | 05 ಸಂಖ್ಯೆ |
| 17. | ಅಲ್ಯುಮಿನಿಯಂ ಕುಶನ್ ಛೇರ್ | 03 ಸಂಖ್ಯೆ |
| 18. | ಇಡ್ಲಿ ಪಾತ್ರೆ ವಿತ್ ಪ್ಲೇಟ್ | 1 ಸೆಟ್ |

**ಭಾಗ-4**

| ಕ್ರಮ ಸಂಖ್ಯೆ | ವಸ್ತುಗಳ ವಿವರ | ಪರಿಮಾಣ |
|---|---|---|
| 1. | ವಾಟರ್ ಫಿಲ್ಟರ್ ವಿತ್ ಸ್ಟ್ಯಾಂಡ್ | 08 ಸಂಖ್ಯೆ |
| 2. | ಸ್ಟೀಲ್ ರೈಸ್ ಹ್ಯಾಂಡಲ್ | 05 ಸಂಖ್ಯೆ |
| 3. | ಸ್ಟೀಲ್ ಸಾಂಬರ್ ಸ್ಪೂನ್ | 03 ಸಂಖ್ಯೆ |
| 4. | ಸ್ಟೀಲ್ ಬೌಲ್ಸ್ | 10 ಸಂಖ್ಯೆ |
| 5. | ಸ್ಟೀಲ್ ಟೀ ಕ್ಯಾಟಲ್ | 01 ಸಂಖ್ಯೆ |

**ಭಾಗ-5**

| ಕ್ರಮ ಸಂಖ್ಯೆ | ವಸ್ತುಗಳ ವಿವರ | ಪರಿಮಾಣ |
|---|---|---|
| 1. | ಕಾವೇರಿ ಪ್ಲಾಸ್ಟಿಕ್ ವಾಟರ್ ಟ್ಯಾಂಕ್ | 03 ಸಂಖ್ಯೆ |

| ಕ್ರಮ ಸಂಖ್ಯೆ | ವಸ್ತುಗಳ ವಿವರ | ಪರಿಮಾಣ |
|---|---|---|
| 2. | ಪ್ಲಾಸ್ಟಿಕ್ ಕುರ್ಚಿ | 10 ಸಂಖ್ಯೆ |
| 3. | ಕಾಸ್ಮೂಸ್ ಎಮರ್ಜನ್ಸಿ ಲೈಟ್ | 02 ಸಂಖ್ಯೆ |
| 4. | ವಿಂಡೊ ಫೈಬರ್ ಸ್ಕ್ರೀನ್ | 02 ಸಂಖ್ಯೆ |

**ಭಾಗ-6**

| ಕ್ರಮ ಸಂಖ್ಯೆ | ವಸ್ತುಗಳ ವಿವರ | ಪರಿಮಾಣ |
|---|---|---|
| 1. | ವುಡನ್ ಟೈಪಿಂಗ್ ಛೇರ್ | 01 ಸಂಖ್ಯೆ |
| 2. | ಚಪಾತಿ ಮಣೆ ವಿತ್ ರೂಲರ್ | 06 ಸಂಖ್ಯೆ |
| 3. | ಕ್ರಿಕೆಟ್ ಬ್ಯಾಟ್ | 02 ಸಂಖ್ಯೆ |
| 4. | ಕ್ರಿಕೆಟ್ ಸ್ಟಂಪ್ | 03 ಸಂಖ್ಯೆ |
| 5. | 4x4 ಟಾರ್ಗ್‌ಟ್ | 17 ಸಂಖ್ಯೆ |
| 6. | ಫಿಗ್ವರ್ 11 ಟಾರ್ಗ್‌ಟ್ | 09 ಸಂಖ್ಯೆ |
| 7. | ಬ್ಲಾಕ್ ಬೋರ್ಡ್ ವಿತ್ ಸ್ಟ್ಯಾಂಡ್ | 01 ಸಂಖ್ಯೆ |
| 8. | ವುಡನ್ ಪಾರ್ಟ್‌ಟೇಷನ್ | 02 ಸಂಖ್ಯೆ |
| 9. | ಸಿಂಗಲ್ ಕುಷನ್ ಸೋಫ | 02 ಸಂಖ್ಯೆ |
| 10. | ಬಿಗ್ ವುಡನ್ ಟೇಬಲ್ | 02 ಸಂಖ್ಯೆ |
| 11. | ವುಡನ್ ಟೀ ಪಾಯಿ | 01 ಸಂಖ್ಯೆ |

**ಭಾಗ-7**

| ಕ್ರಮ ಸಂಖ್ಯೆ | ವಸ್ತುಗಳ ವಿವರ | ಪರಿಮಾಣ |
|---|---|---|
| 1. | 10x20 ಶ್ಯಾಮಿಯಾನ | 02 ಸಂಖ್ಯೆ |
| 2. | ಕನ್ನತ್ | 05 ಸಂಖ್ಯೆ |
| 3. | ಬಿದರು ಬಂಬೂ | 12 ಸಂಖ್ಯೆ |
| 4. | ಕಾಟನ್ ಟೇಪ್ | 25 ಕಾಟ್‌ಗಳಿಗೆ ಸಂಬಂಧಿಸಿದ್ದು |
| 5. | ವಾಲಿಬಾಲ್ | 02 ಸಂಖ್ಯೆ |
| 6. | ವಾಲಿಬಾಲ್ ನೆಟ್ | 02 ಸಂಖ್ಯೆ |
| 7. | ಫುಟ್‌ಬಾಲ್ | 01 ಸಂಖ್ಯೆ |
| 8. | ಫುಟ್‌ಬಾಲ್ ನೆಟ್ | 01 ಸಂಖ್ಯೆ |
| 9. | ಟೆನ್ನಿಸ್ ಬಾಲ್ | 04 ಸಂಖ್ಯೆ |
| 10. | ಪಿಂಗಾಣಿ ಪ್ಲೇಟ್ | 02 ಸಂಖ್ಯೆ |
| 11. | ಲಾರ್ಜ್ ರೇಂಜ್ ಅಂಬ್ರೇಲ್ಲಾ | 01 ಸಂಖ್ಯೆ |
| 12. | ರೆಡ್ ಸಾಸ್ | 20 ಸಂಖ್ಯೆ |
| 13. | ಎಫ್.ಜಿ. ಹೆಲ್ಮೆಟ್ | 128 ಸಂಖ್ಯೆ |
| 14. | ಹಾಟ್ ಬಾಕ್ಸ್ | 01 ಸಂಖ್ಯೆ |

ಮೇಲ್ಕಂಡ ಅನುಪಯುಕ್ತ ಸಾಮಗ್ರಿಗಳನ್ನು ಕೆಳಕಂಡ ಷರತ್ತುಗಳ ಮೇಲೆ ಹರಾಜು ಮಾಡಲಾಗುವುದು.

1. ಮೊಹರು ಮಾಡಿದ ಟೆಂಡರ್‌ನ್ನು ಕಮಾಂಡೆಂಟ್, 9ನೇ ಪಡೆ, ಕೆ.ಎಸ್.ಆರ್.ಪಿ. ನಂ.60 ರಿಚ್‌ಮಂಡ್ ರಸ್ತೆ, ಬೆಂಗಳೂರು-25, ಇವರಿಗೆ ಅನುಪಯುಕ್ತ ಸಾಮಗ್ರಿಗಳ ಖರೀದಿಗಾಗಿ **ಟೆಂಡರ್** ಎಂದು ಲಕೋಟೆ ಮೇಲೆ ಬರೆದು ದಿನಾಂಕ: 05.08.2006ರ ಸಂಜೆ 5 ಗಂಟೆಯ ಒಳಗಾಗಿ ಕಛೇರಿಗೆ ತಲುಪುವಂತೆ ಕಳುಹಿಸುವುದು.
2. ಟೆಂಡರ್ ಬೆಲೆಯನ್ನು ಅಂಕಿ ಮತ್ತು ಅಕ್ಷರಗಳಲ್ಲಿ ನಮೂದಿಸುವುದು.
3. ಹರಾಜಿನಲ್ಲಿ ಭಾಗವಹಿಸುವವರು ರು.500-00 (ರೂಪಾಯಿ ಐದು ನೂರು ಮಾತ್ರ)ಗಳನ್ನು ಹರಾಜು ಪ್ರಾರಂಭವಾಗುವ ಒಂದು ಗಂಟೆ ಮುಂಚಿತವಾಗಿ (ಇ.ಎಂ.ಡಿ.) ಕಮಾಂಡೆಂಟ್, 9ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು-25 ಅಥವಾ ಅವರಿಂದ ನೇಮಕಗೊಂಡ ಹರಾಜು ಮಾಡುವ ಅಧಿಕಾರಿಯವರಲ್ಲಿ ಠೇವಣಿ ಇಡುವುದು.
4. ಪ್ರತಿಯೊಂದು ವಸ್ತುಗಳು ಗುಂಪು (ಭಾಗ) ಗಳಲ್ಲಿ ವಿಂಗಡಣೆಯಾಗಿದ್ದರಿಂದ ಆಯಾ ಗುಂಪಿನ ಅನುಪಯುಕ್ತ ಸಾಮಗ್ರಿಗಳಿಗೆ ಅತಿ ಹೆಚ್ಚಿನ ಬೆಲೆಯನ್ನು ಕೂಗಿದವರಿಗೆ/ ಟೆಂಡರ್ ನೀಡಿದವರಿಗೆ ನೀಡಲಾಗುವುದು.
5. ಬಿಡ್ ಹಣವನ್ನು ಖರೀದಿದಾರರು ವಸ್ತುಗಳನ್ನು ಅಥವಾ ವಸ್ತುಗಳ ಗುಂಪುಗಳನ್ನು ಖರೀದಿಸಿದ ದಿವಸದಂದೆ ಸಂಪೂರ್ಣ ಹಣವನ್ನು ಕೆ.ಎಸ್.ಟಿ. ಹಾಗೂ ಸರ್‌ಚಾರ್ಜ್‌ಗಳೊಂದಿಗೆ ಪಾವತಿ ಮಾಡತಕ್ಕದ್ದು. ಒಂದು ವೇಳೆ ತಪ್ಪಿದಲ್ಲಿ ಹಾಗೆ ಖರೀದಿಸಿದ ವಸ್ತುಗಳನ್ನು ಪುನಃ ಅಂದೆ ಹರಾಜು ಮಾಡಲಾಗುವುದು. ಒಂದು ವೇಳೆ ತರುವಾಯ ವಿಕ್ರಯದ ದರ ಮೊದಲಿನ ಬಿಡ್‌ಗಿಂತ ಕಡಿಮೆಯಾದಲ್ಲಿ ತಪ್ಪಿತಸ್ಥರಿಂದ ಮೊದಲನೇ ಖರೀದಿಯ ಭಿನ್ನತೆಯನ್ನು ಸರಿಪಡಿಸಿಕೊಡಬೇಕು.

6. ಹರಾಜು ಮಾಡುವ ಅಧಿಕಾರಿಯವರು ಯಾವುದೇ ಕಾರಣವಿಲ್ಲದೆ ಬಿಡ್‌ನ್ನು ಮುನ್ಸೂಚನೆ ಇಲ್ಲದೆ ಹಸ್ತಾಂತರ ಮಾಡಲು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಹೊಂದಿರುತ್ತಾರೆ.
7. ವಸ್ತುಗಳನ್ನು ಖರೀದಿ ಮಾಡಿದ ಹಣವನ್ನು ಮತ್ತು ಕರ್ನಾಟಕ ರಾಜ್ಯ ಮಾರಾಟ ತೆರಿಗೆಯನ್ನು ಹಾಗೂ ಸರ್‌ಚಾರ್ಜ್‌ನ್ನು ಬಿಡ್ ಹಣದ ಜೊತೆಯಲ್ಲಿಯೇ ನಿಯಮಾನುಸಾರವಾಗಿ ವಸೂಲು ಮಾಡಲಾಗುವುದು.
8. ವಸ್ತುಗಳನ್ನು ಖರೀದಿಸುವವರು ಅದೇ ದಿವಸ ಹರಾಜು ಮಾಡಿದ ಸ್ಥಳದಿಂದ ಸಾಗಿಸುವ ವ್ಯವಸ್ಥೆಯನ್ನು ಮಾಡಿಕೊಳ್ಳತಕ್ಕದ್ದು. ಇಲಾಖೆಯಿಂದ ಕಾಯ್ದುಕೊಳ್ಳುವ ವ್ಯವಸ್ಥೆ ಇರುವುದಿಲ್ಲ.
9. ಠೇವಣಿ ಇಡಲಾಗಿದ್ದ (ಇ.ಎಂ.ಡಿ.) ಹಣ ರೂ.500-00 (ರೂಪಾಯಿ ಐದು ನೂರು ಮಾತ್ರ)ಗಳನ್ನು ಹರಾಜಿನಲ್ಲಿ ಯಶಸ್ವಿಯಾಗದ ಖರೀದಿದಾರರಿಗೆ ಬಿಡ್ ಮುಗಿದ ಕೂಡಲೇ ವಾಪಸ್ಸು ಮಾಡಲಾಗುವುದು.
10. ಸರ್ಕಾರದ ವಸ್ತುಗಳ ಹರಾಜಿನಲ್ಲಿ ಭಾಗಿದಾರರಾದವರೆಲ್ಲರು ಸರ್ಕಾರಿ ನಿಯಮ ನಿಬಂಧನೆಗಳನ್ನು ವಿಶ್ವಾಸಿಕವಾಗಿ ಪಾಲಿಸತಕ್ಕದ್ದು.
ಹೆಚ್ಚಿನ ವಿವರಣೆಗಳಿಗಾಗಿ ಈ ಕಛೇರಿಯಲ್ಲಿ ಕಛೇರಿ ಸಮಯದಲ್ಲಿ ಸಂಪರ್ಕಿಸಬಹುದು.

ಕಮಾಂಡೆಂಟ್,
ಪಿ.ಆರ್.374 9ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು-25.

**FORM-IV**
**(See Rule-12)**
**NOTICE**

It is hereby notified that the undersigned has changed her name from **Smt. CHANCHALA GIRIYAPPA JOGALEKAR, to Smt CHANNAMMA MALLANAGOUDA KANIKERI.**

PD-137 **Smt. CHANCHALA GIRIYAPPA JOGALEKAR**

**ಪೊಲೀಸ್ ಇಲಾಖೆ**

**ಕಮಾಂಡೆಂಟ್ 9ನೇ ಪಡೆ, ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ನಂ.60, ರಿಚ್‌ಮಂಡ್ ರಸ್ತೆ, ಬೆಂಗಳೂರು-25**

**ಸಂಖ್ಯೆ: 09/ ವಾಸಾವಿ/ ಹರಾಜು/ 328/ 2006-07, ದಿನಾಂಕ: 26ನೇ ಜೂನ್, 2006**

ಅನುಪಯುಕ್ತವಾದ ಬಿಡಿ ಭಾಗಗಳು ಮತ್ತು ಟೈರ್ಸ್, ಟ್ಯೂಬ್ಸ್, ಪ್ಲಾಪ್ಸ್ ಹಾಗೂ ಸುಟ್ಟ ಎಣ್ಣೆಯ ಸಾರ್ವಜನಿಕ ಟೆಂಡರ್ ಕಂ ಬಹಿರಂಗ ಹರಾಜು.

ಮೇಲ್ಕಂಡ ಘಟಕದ ವಾಹನಗಳನ್ನು ದುರಸ್ತಿಗೊಳಿಸಿದ ಬಿಡಿಭಾಗಗಳು ವಾಹನಗಳ ಸವೆದುಹೋದ ಟೈರ್ಸ್, ಟ್ಯೂಬ್ಸ್, ಪ್ಲಾಪ್ಸ್ ಹಾಗೂ ಸುಟ್ಟ ಎಣ್ಣೆಯನ್ನು ಟೆಂಡರ್ ಕಂ ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲಾಗುವುದು. **ಹರಾಜು ದಿನಾಂಕ: 07.08.2006ರಂದು ಬೆಳಿಗ್ಗೆ 11.00 ಗಂಟೆಗೆ** ಘಟಕದ ವಾಹನ ಸಾರಿಗೆ ವಿಭಾಗದ ಆವರಣದಲ್ಲಿ ನಡೆಸಲಾಗುವುದು. ಇ.ಎಂ.ಡಿ. ರೂ.1000-00 (ರೂಪಾಯಿ ಒಂದು ಸಾವಿರಗಳು ಮಾತ್ರ) ಟೆಂಡರ್ ಸ್ವೀಕರಿಸಲು **ಕೊನೆಯ ದಿನಾಂಕ: 05.08.2006 ಸಂಜೆ 4 ಗಂಟೆಯವರೆಗೆ** ಅನುಪಯುಕ್ತ ಬಿಡಿಭಾಗಗಳು ಟೈರ್ಸ್, ಟ್ಯೂಬ್ಸ್, ಪ್ಲಾಪ್ಸ್ ಹಾಗೂ ಸುಟ್ಟ ಎಣ್ಣೆ ವಿವರಗಳು ಈ ಕೆಳಕಂಡಂತಿರುತ್ತದೆ.

| | |
|---|---|
| 1) ಬಿಡಿಭಾಗಗಳು: 2004 ಮತ್ತು 2005ನೇ ಸಾಲಿನದು | 200 ಸಂಖ್ಯೆ. |
| 2) ಟೈರ್ಸ್ : 2004 ಮತ್ತು 2005ನೇ ಸಾಲಿನದು | 50 ಸಂಖ್ಯೆ. |
| 3) ಟ್ಯೂಬ್ಸ್ : 2004 ಮತ್ತು 2005ನೇ ಸಾಲಿನದು | 50 ಸಂಖ್ಯೆ. |
| 4) ಪ್ಲಾಪ್ಸ್ : 2004 ಮತ್ತು 2005ನೇ ಸಾಲಿನದು | 32 ಸಂಖ್ಯೆ. |
| 5) ಸುಟ್ಟಎಣ್ಣೆ : 2004 ಮತ್ತು 2005ನೇ ಸಾಲಿನದು | 400 ಲೀಟರ್. |

ಈ ಮೇಲ್ಕಂಡ ಬಿಡಿಭಾಗಗಳು ಟೈರ್ಸ್, ಟ್ಯೂಬ್ಸ್, ಪ್ಲಾಪ್ಸ್ ಹಾಗೂ ಸುಟ್ಟ ಎಣ್ಣೆಯ ವೀಕ್ಷಣೆ ಹಾಗೂ ಹೆಚ್ಚಿನ ವಿವರಗಳನ್ನು ಈ ಕಛೇರಿಯಿಂದ ಪಡೆಯಬಹುದು.

ಕಮಾಂಡೆಂಟ್,
ಪಿ.ಆರ್.375 9ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು.

**ಕೃಷಿ ಇಲಾಖೆ**

**ಕೃಷಿ ಅಧಿಕಾರಿಯವರ ಕಛೇರಿ, ಪರತಂತ್ರ ಜೀವಿ ಪ್ರಯೋಗ ಕೇಂದ್ರ, ಮಂಡ್ಯ**

**ಟೆಂಡರ್ ಕಂ ಬಹಿರಂಗ ಹರಾಜು**

**ಸಂಖ್ಯೆ: ಕೃಅ: ಪಜೀಪ್ರ: ಮಂಡ್ಯ: ಉಪಕರಣ: ಅನುಪಯುಕ್ತ: ವಿಲೇವಾರಿ: 2006-07, ದಿನಾಂಕ:5ನೇ ಜೂನ್, 2006**

**ವಿಷಯ:** ಕೃಷಿ ಅಧಿಕಾರಿ, ಪರತಂತ್ರ ಜೀವಿ ಪ್ರಯೋಗ ಕೇಂದ್ರ ಕಛೇರಿಯ ಅನುಪಯುಕ್ತ ವಸ್ತುಗಳನ್ನು ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** (1) ಜಂಟಿ ಕೃಷಿ ನಿರ್ದೇಶಕರ ಕಛೇರಿಯ ಪತ್ರದ ನಂ.ಲೆಕ್ಕ-2: ಅನು: ವಸ್ತು: ಹರಾಜು: ಅನುಮತಿ:04.05.2006, ದಿನಾಂಕ: 10.03.2005, 07.04.2005, 21.04.2005, 15.09.2005 ಹಾಗೂ 09.05.2006.
(2) ಕೃಷಿ ಆಯುಕ್ತರ ಕಾರ್ಯಾಲಯದ ಪತ್ರದ ನಂ.ಸಾಮಾನ್ಯ: ಜಡವಸ್ತು: ಅನುಪ: 30: 2004-05, ದಿನಾಂಕ: 19.11.2005.

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಕೃಷಿ ಅಧಿಕಾರಿ, ಪರತಂತ್ರ ಜೀವಿ ಪ್ರಯೋಗ ಕೇಂದ್ರ, ಮಂಡ್ಯ ಕಛೇರಿಗೆ ಸೇರಿದ ಈ ಕೆಳಕಂಡ ಕ್ರ.ಸಂ.1 ರಿಂದ 20 ರವರೆಗೆ ತಿಳಿಸಲಾಗಿರುವ ಅನುಪಯುಕ್ತ ಜಡವಸ್ತುಗಳನ್ನು **ದಿನಾಂಕ:26.07.2006ರಂದು ಬೆಳಿಗ್ಗೆ 11.00 ಗಂಟೆಗೆ** ಕೃಷಿ ಅಧಿಕಾರಿ, ಪರತಂತ್ರ ಜೀವಿ ಪ್ರಯೋಗ ಕೇಂದ್ರ, ಮಂಡ್ಯ ಇವರ ಕಛೇರಿ ಆವರಣದಲ್ಲಿ ಟೆಂಡರ್ ಕಂ ಬಹಿರಂಗ ಹರಾಜು ಮಾಡಲಾಗುವುದು. ಸದರಿ ಅನುಪಯುಕ್ತ ವಸ್ತುಗಳನ್ನು ಕಛೇರಿ ವೇಳೆಯಲ್ಲಿ (ರಜಾ ದಿನಗಳನ್ನು ಹೊರತುಪಡಿಸಿ) ಪರೀಕ್ಷಿಸಬಹುದಾಗಿದೆ.

| ಕ್ರಮ ಸಂಖ್ಯೆ | ಅನುಪಯುಕ್ತ ವಸ್ತುಗಳ ಹೆಸರು | ಪ್ರಮಾಣ | ಸ್ಥಿತಿ |
|---|---|---|---|
| 1 | 2 | 3 | 4 |
| 1. | ಮರದ ಬೀರು | 20 | ಅನುಪಯುಕ್ತ |
| 2. | ಜಿಂಕ್‌ಶೀಟ್ ಟ್ರೇ | 100 | ಅನುಪಯುಕ್ತ |
| 3. | ಡಿಗ್ಗರ್‌ವಿತ್ ಕವರ್ | 2 | ಅನುಪಯುಕ್ತ |
| 4. | ಮಚ್ಚು | 1 | ಅನುಪಯುಕ್ತ |
| 5. | ಸ್ಪ್ರಿಂಗ್ ಬ್ಯಾಲೆನ್ಸ್ | 1 | ಅನುಪಯುಕ್ತ |
| 6. | ಮೈಕ್ರೋಸ್ಕೋಪ್ | 1 | ಅನುಪಯುಕ್ತ |
| 7. | ಸ್ಟೂಲ್ | 1 | ಅನುಪಯುಕ್ತ |
| 8. | ಮೈಕ್ರೋಸ್ಕೋಪ್ ಡಿಸೆಕ್ಷನ್ (215671) | 1 | ಅನುಪಯುಕ್ತ |
| 9. | ಪೆಟ್ರೋಮ್ಯಾಕ್ಸ್ ಲ್ಯಾಂಪ್ | 4 | ಅನುಪಯುಕ್ತ |
| 10. | ಎಮರ್‌ಜೆನ್ಸಿಲೈಟ್ | 1 | ಅನುಪಯುಕ್ತ |
| 11. | ಸ್ಟೆಬಿಲೈಸರ್ (ಅಲ್‌ಟ್ರಾನ್) | 2 | ಅನುಪಯುಕ್ತ |
| 12. | ರೆಫ್ರಿಜರೇಟರ್ (ಇಟ್ಯಾಚಿ) | 1 | ಅನುಪಯುಕ್ತ |
| 13. | ಡೀಸಲ್ ಜನರೇಟರ್ | 1 | ಅನುಪಯುಕ್ತ |
| 14. | ಪರ್‌ಪೆಚುಯಲ್ ಸೈಲೆಂಟ್ ಜನರೇಟರ್ | 1 | ಅನುಪಯುಕ್ತ |
| 15. | ರೆಫ್ರಿಜರೇಟರ್ (ಡಿ.ಆರ್.ಇ.) | 1 | ಅನುಪಯುಕ್ತ |
| 16. | ಕೋಲುಗುದ್ದಲಿ | 1 | ಅನುಪಯುಕ್ತ |
| 17. | ಮೈಕ್ರೋಸ್ಕೋಪ್ | 1 | ಅನುಪಯುಕ್ತ |
| 18. | ಟೀಕ್‌ವುಡ್ ಛೇರ್, (ವಿತ್‌ಆರ್ಮ್) | 1 | ಅನುಪಯುಕ್ತ |
| 19. | ಪೆಸ್ಟ್‌ಕ್ಲಾಕ್ (ಜಲಾಲ್ ಅಂಡ್‌ಸನ್ಸ್) | 1 | ಅನುಪಯುಕ್ತ |
| 20. | ವಾಲ್‌ಕ್ಲಾಕ್ (ಬಿಮ್‌ಬಾಮ್) | 1 | ಅನುಪಯುಕ್ತ |
| 21. | ಐರನ್ ಛೇರ್‌ಗಳು (ಫೋಲ್ಡಿಂಗ್) | 2 | ಅನುಪಯುಕ್ತ |

**ಹರಾಜಿನ ಷರತ್ತುಗಳು**

1. ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬರು ರೂ.3000-00 (ಮೂರು ಸಾವಿರ ರೂ.ಗಳನ್ನು) ಠೇವಣಿ ಇಟ್ಟು ಹರಾಜಿನಲ್ಲಿ ಭಾಗವಹಿಸತಕ್ಕದ್ದು.
2. ಅನುಪಯುಕ್ತ ವಸ್ತುಗಳನ್ನು ಯಾವ ಸ್ಥಿತಿಯಲ್ಲಿವೆಯೋ ಅದೇ ಸ್ಥಿತಿಯಲ್ಲಿ ಟೆಂಡರ್ ಕಂ ಬಹಿರಂಗ ಹರಾಜು ಮಾಡಲಾಗುವುದು.
3. ಟೆಂಡರಿನಲ್ಲಿ ಭಾಗವಹಿಸಲು ಇಚ್ಛಿಸುವವರು ಕೃಷಿ ಅಧಿಕಾರಿ, ಪರತಂತ್ರ ಜೀವಿ ಪ್ರಯೋಗ ಕೇಂದ್ರ, ಮಂಡ್ಯ ಇವರ ಹೆಸರಿನಲ್ಲಿ ಅನುಪಯುಕ್ತ ವಸ್ತುಗಳಿಗೆ 3000-00 ರೂ. ತೆರೆದ (open) ಡಿ.ಡಿ. ಖರೀದಿಸಿ ಟೆಂಡರ್ ಫಾರಂ ಜೊತೆ ಲಗತ್ತಿಸತಕ್ಕದ್ದು. ಫಾರಂಗಳನ್ನು ದಿನಾಂಕ: 09.07.2006ರ ಒಳಗಾಗಿ ಕಛೇರಿ ಕೆಲಸದ ವೇಳೆಯಲ್ಲಿ ರೂ.10-00 ಗಳನ್ನು ಪಾವತಿಸಿ ಅರ್ಜಿ ಸಲ್ಲಿಸಿ ಪಡೆಯತಕ್ಕದ್ದು.

   ಭರ್ತಿ ಮಾಡಿದ ಟಂಡರ್ ಫಾರಂಗಳನ್ನು ಮೊಹರು ಮಾಡಿದ ಲಕೋಟೆಯಲ್ಲಿ ಈ ಕಛೇರಿಗೆ ಅಂಚೆ ಮೂಲಕ ಅಥವಾ ಖುದ್ದಾಗಿ ದಿನಾಂಕ:25.07.2006 ಸಂಜೆ 5.30 ಗಂಟೆಯೊಳಗೆ ಕಛೇರಿಯ ಮುಖ್ಯಸ್ಥರ ಕೈ ಸೇರುವಂತೆ ಕಳೂಹಿಸುವುದು.
4. ಮೊಹರಾದ ಟೆಂಡರಿನ ಲಕೋಟೆಯನ್ನು ಕಛೇರಿಯಲ್ಲಿ ಕಾನೂನು ರೀತ್ಯಾ ಇಡಲಾಗುವುದು.
5. ಟೆಂಡರ್ ಸಲ್ಲಿಸಿದವರು ಒಂದು ವೇಳೆ ಬಹಿರಂಗ ಹರಾಜಿನಲ್ಲೂ ಭಾಗವಹಿಸಲು ಇಚ್ಛಿಸಿದಲ್ಲಿ ರೂ.3000-00 ಗಳನ್ನು ಠೇವಣಿ ಇಟ್ಟು ಭಾಗವಹಿಸುವುದು. ಬಹಿರಂಗ ಹರಾಜು ಪ್ರಕ್ರಿಯೆ ಮುಕ್ತಾಯವಾದ ನಂತರ ಟೆಂಡರ್ ಲಕೋಟೆಯನ್ನು ಬಿಡ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಹಾಗೂ ಟೆಂಡರ್ ಮತ್ತು ಬಹಿರಂಗ ಹರಾಜಿನಲ್ಲಿ ಅಖೈರು ಬಿಡ್‌ಗಳಲ್ಲಿ ಯಾವುದು ಹೆಚ್ಚೋ ಅದನ್ನು ಪರಿಗಣಿಸಲಾಗುವುದು.
6. ಹರಾಜಿನಲ್ಲಿ ಬಿಡ್ಡು ನಿಂತಿರುವವರು ಬಿಡ್ಡು ಮೊತ್ತ ಶೇ.25ರಷ್ಟನ್ನು (ಠೇವಣಿ ಹಣವನ್ನು ಹೊರತುಪಡಿಸಿ) ಸ್ಥಳದಲ್ಲಿ ಪಾವತಿ ಮಾಡಬೇಕು. ಹಾಗೂ ನಿಗದಿಪಡಿಸಲಾದ ಮಾರಾಟ ತೆರಿಗೆಯನ್ನು ಬಿಡ್ಡುದಾರರು: ಟೆಂಡರ್‌ದಾರರು ಭರಿಸಬೇಕು.
7. ಹರಾಜು ಮಾಡಲ್ಪಟ್ಟ ವಸ್ತುಗಳನ್ನು ಮೇಲಾಧಿಕಾರಿಗಳ ಅನುಮೋದನೆ ಪಡೆದು ಹರಾಜುದಾರರಿಗೆ ತಿಳಿಸಿದ ಒಂದು ವಾರದೊಳಗೆ ಉಳಿಕೆ ಬಿಡ್ಡು ಮೊತ್ತವನ್ನು ಕಛೇರಿಗೆ ಪಾವತಿಸಿ ವಶಕ್ಕೆ ಪಡೆದುಕೊಳ್ಳುವುದು. ತಪ್ಪಿದಲ್ಲಿ ಬಿಡ್ಡುದಾರರು ಪಾವತಿಸಿರುವ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮರು ಹರಾಜು ಮಾಡಲಾಗುವುದು.
8. ಬಿಡ್ಡನ್ನು ಒಪ್ಪುವ ಮತ್ತು ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಲಾಗಿದೆ.
9. ಹರಾಜಿನಲ್ಲಿ ಬಿಡ್ಡು ನಿಲ್ಲದವರಿಗೆ ಠೇವಣಿ ಹಣ ಡಿ.ಡಿ.ಯನ್ನು ಹರಾಜು ಮಾಡಿದ ನಂತರ ಹಿಂದಿರುಗಿಸಲಾಗುವುದು.

ಕೃಷಿ ಅಧಿಕಾರಿ,

ಪಿ.ಆರ್.377

ಪರತಂತ್ರ ಜೀವಿ ಪ್ರಯೋಗಾಲಯ, ಮಂಡ್ಯ.

## ನಿಯಂತ್ರಕರ ಕಛೇರಿ, ರಾಜ್ಯಲೆಕ್ಕಪತ್ರ ಇಲಾಖೆ, 6ನೇ ಮಹಡಿ, ಕಾವೇರಿ ಭವನ, ಬೆಂಗಳೂರು

### ಅಧಿಸೂಚನೆ

### ಸಂಖ್ಯೆ: ರಾಲೆಪ/ 15/ ಸಿನೇಇ/ 2001, ಬೆಂಗಳೂರು, ದಿನಾಂಕ: 24ನೇ ಜೂನ್, 2006

### ಅಂತಿಮ ಆಯ್ಕೆ ಪಟ್ಟಿ ಪ್ರಕಟಣೆ

ರಾಜ್ಯ ಲೆಕ್ಕಪತ್ರ ಇಲಾಖೆಯಲ್ಲಿ ಸರ್ಕಾರದ ಅಧಿಸೂಚನೆ ದಿನಾಂಕ: 21.11.2001ರನ್ವಯ ಹಾಗೂ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ದಿನಾಂಕ: 07.01.2006ರಂತೆ ನೇರ ನೇಮಕಾತಿ ಮೂಲಕ ಕೊರತೆಯಿಂದ ಪರಿಶಿಷ್ಟ ಜಾತಿಯ ಎರಡು ಬ್ಯಾಕ್‌ಲಾಗ್ ಬೆರಳಚ್ಚುಗಾರರ ಹುದ್ದೆಗಳನ್ನು ಭರ್ತಿ ಮಾಡಲು ಸ್ವೀಕರಿಸಲಾದ ಅರ್ಜಿಗಳನ್ನು ಪರಿಶೀಲಿಸಿ ಅರ್ಹ ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಈ ಕಛೇರಿಯ ಸಮಸಂಖ್ಯೆಯ ಅಧಿಸೂಚನೆ ದಿನಾಂಕ: 24.04.2006ರಂದು ಪ್ರಧಾನ ಕಛೇರಿಯ ಸೂಚನಾ ಫಲಕದಲ್ಲಿ ಹಾಗೂ ದಿನಾಂಕ:18.05.2006ರ ಕರ್ನಾಟಕ ರಾಜ್ಯಪತ್ರದಲ್ಲಿ ಆಕ್ಷೇಪಣೆಗಳನ್ನು ಆಹ್ವಾನಿಸಿ ಪ್ರಕಟಣೆ ಹೊರಡಿಸಲಾಗಿತ್ತು. ಈ ಪಟ್ಟಿಗೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ. ಆದಕಾರಣ ಪರಿಶಿಷ್ಟ ಜಾತಿಯ ಎರಡು ಬ್ಯಾಕ್‌ಲಾಗ್ ಬೆರಳಚ್ಚುಗಾರರ ಹುದ್ದೆಗಳನ್ನು ಭರ್ತಿ ಮಾಡಲು 29 ರಿಂದ 40 ವರ್ಷ ವಯೋಮಿತಿ ಹೊಂದಿರುವ ಕೆಳಕಂಡ ಅರ್ಹ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿ/ ಹೆಚ್ಚುವರಿ ಆಯ್ಕೆ ಪಟ್ಟಿಯನ್ನು ಈ ಮೂಲಕ ಪ್ರಕಟಿಸಲಾಗಿದೆ.

**ಮುಖ್ಯ ಆಯ್ಕೆ ಪಟ್ಟಿ**

| ಕ್ರ.ಸಂ. | ಆಯ್ಕೆಯಾದ ಅಭ್ಯರ್ಥಿಯ ಹೆಸರು | ವಯಸ್ಸು | ಸರಾಸರಿ ಅಂಕ |
|---|---|---|---|
| 1. | ಚಂದ್ರಕಾಂತ ಕೆ. ಸಂಗೋಳಗಿ, ತಂದೆ ಕಾಶಪ್ಪ, ಪೂಜಾ ಕಾಲೋನಿ, ಪ್ಲಾಟ್ ನಂ.189, ಕೊಸನೂರ್ ರೋಡ್, ಗುಲ್ಬರ್ಗಾ-585106. | 37 ವರ್ಷ | 71.50 |
| 2. | ನಿರ್ಮಲಾದೇವಿ ತಂದೆ ಹುಚ್ಚಪ್ಪ, ಧನ್ವಂತರಿ ಕಾಲೋನಿ, ಶ್ರೀರಂಗ ನಿಲಯ, ಭಾಗ್ಯ ನಗರ, ಜಿಲ್ಲೆ/ತಾಲ್ಲೂಕು ಕೊಪ್ಪಳ. | 32 ವರ್ಷ | 69.25 |
| **ಹೆಚ್ಚುವರಿ ಆಯ್ಕೆ ಪಟ್ಟಿ** | | | |
| ಕ್ರ.ಸಂ. | ಆಯ್ಕೆಯಾದ ಅಭ್ಯರ್ಥಿಯ ಹೆಸರು | ವಯಸ್ಸು | ಸರಾಸರಿ ಅಂಕ |
| 1. | ವಿಜಯ ಕುಮಾರ್ ತಂದೆ ಸಿದ್ರಾಮ, ಕೇರ್‌ಆಫ್ ಶ್ರೀಮತಿ ಆರತಿ, ಬೆರಳಚ್ಚುಗಾರರು, ಜಿಲ್ಲಾಧಿಕಾರಿಗಳ ಕಛೇರಿ, ಬೀದರ್-585401. | 33 ವರ್ಷ | 66.00 |
| 2. | ಅನಿಲ್ ಅಲ್ದಿ ತಂದೆ ಮಹದೇವಪ್ಪ, ಎ.ಎಂ.ಅಲ್ದಿ ಕಂಠೆಪ್ಪಪ್ಲಾಟ್, ಲಕ್ಷ್ಮಿನಗರ, ಸಿಂಧಗಿ ತಾಲ್ಲೂಕು, ಬಿಜಾಪುರ ಜಿಲ್ಲೆ-586128. | 29 ವರ್ಷ | 65.75 |

ನಿಯಂತ್ರಕರು,

ಪಿ.ಆರ್.378 ರಾಜ್ಯಲೆಕ್ಕಪತ್ರ ಇಲಾಖೆ, ಬೆಂಗಳೂರು.

## ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಹಾಸನ ವಿಭಾಗ, ಹಾಸನ

### ಸಂಕ್ಷಿಪ್ತ ಟೆಂಡರ್ ಪ್ರಕಟಣೆ

### ಸಂಖ್ಯೆ:ಎ5/ ಮಿನಿ ಜೂ/ ಆಹಾರ/ ಟೆಂಡರ್/ ಸಿಆರ್-2/ 2006-07, ದಿನಾಂಕ:17ನೇ ಜೂನ್, 2006

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಹಾಸನ ವಿಭಾಗಕ್ಕೆ ಸೇರಿದ ಹಾಸನ ವಲಯದ ಗೆಂಡೆಕಟ್ಟೆ ಮಿನಿ ಜೂನಲ್ಲಿರುವ ಪ್ರಾಣಿಗಳಿಗೆ 2006-07ನೇ ಸಾಲಿಗೆ ಆಹಾರ ಪದಾರ್ಥಗಳನ್ನು ಸರಬರಾಜು ಮಾಡಲು ಈ ವಿಭಾಗದಲ್ಲಿ 2006-07ನೇ ಸಾಲಿನಲ್ಲಿ ನೋಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಮೊಹರಾದ ಟೆಂಡರುಗಳನ್ನು ಕರೆಯಲಾಗಿದೆ. ಟೆಂಡರುಗಳನ್ನು ದಿನಾಂಕ:19.07.2006ರಂದು ಸಾಯಂಕಾಲ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಸ್ವೀಕರಿಸಿದ ಟೆಂಡರ್‌ಗಳನ್ನು ಅದೇ ದಿನ ಸಂಜೆ 4.30 ಗಂಟೆಗೆ ಹಾಜರಿರುವ ಗುತ್ತಿಗೆದಾರರ ಸಮಕ್ಷಮ ತೆರೆಯಲಾಗುವುದು. ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರು ಟೆಂಡರನ್ನು ಸಲ್ಲಿಸಬಹುದಾಗಿರುತ್ತದೆ. ಅಂದು ಯಾವುದೇ ಟೆಂಡರುದಾರರು ಭಾಗವಹಿಸಿ ಟೆಂಡರ್ ನೀಡದಿದ್ದಲ್ಲಿ ಪುನಃ ದಿನಾಂಕ: 25.07.2006ರಂದು ಮರು ಟೆಂಡರ್ ನಿಗದಿಪಡಿಸಿದ್ದು ಅಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು ಮತ್ತು ಹಾಜರಿರುವ ಗುತ್ತಿಗೆದಾರರ ಸಮಕ್ಷಮ ಸಂಜೆ 4.30 ಗಂಟೆಗೆ ತೆರೆಯಲಾಗುವುದು. ಇದಕ್ಕಾಗಿ ಪುನಃ ಟೆಂಡರ್ ಕರೆಯಲಾಗುವುದಿಲ್ಲವಾಗಿ ತಿಳಿಸಿದೆ.

**ಅನುಸೂಚಿ**

| ಕ್ರ. ಸಂ. | ಆಹಾರ ಪದಾರ್ಥಗಳ ಹೆಸರು | ಒಂದು ದಿನಕ್ಕೆ ಬೇಕಾಗುವ ಆಹಾರ ಪದಾರ್ಥಗಳು (ಕೆ.ಜಿ.ಗಳಲ್ಲಿ) | ಅಂದಾಜು ಮೊತ್ತ ರೂ.ಗಳಲ್ಲಿ | ಟೆಂಡರ್ ಜೊತೆ ಲಗತ್ತಿಸಬೇಕಾದ ಇ.ಎಂ.ಡಿ. (ರೂ.ಗಳಲ್ಲಿ) |
|---|---|---|---|---|
| 1. | ಹುರುಳಿ | 28.50 ಕೆ.ಜಿ. | 6,90,600/- | 17,300/- |
| 2. | ಗೋಧಿ ಬೂಸ | 44.25 ಕೆ.ಜಿ. | | |
| 3. | ಉಪ್ಪು | 5.40 ಕೆ.ಜಿ. | | |
| 4. | ರಾಗಿ ಹುಲ್ಲು | 117.00 ಕೆ.ಜಿ. | | |
| 5. | ಭತ್ತದ ಹುಲ್ಲು | 11.00 ಕೆ.ಜಿ. | | |
| 6. | ಸೌದೆ | 15.00 ಕೆ.ಜಿ. | | |

**ಷರತ್ತುಗಳು**

1. ಟೆಂಡರು ಫಾರಂ ಒಂದಕ್ಕೆ ರೂ.200/- ಹಾಗೂ ಚಾಲ್ತಿಯಲ್ಲಿರುವ ತೆರಿಗೆಗಳನ್ನು ಪಾವತಿಸಿ, ದಿನಾಂಕ:19.07.2006ರಂದು ಮಧ್ಯಾಹ್ನ 1.30 ರೊಳಗೆ ಟೆಂಡರ್ ಫಾರಂಗಳನ್ನು ಪಡೆದುಕೊಳ್ಳುವುದು. ಅಂದು ಟೆಂಡರ್ ಬರದಿದ್ದಲ್ಲಿ ಪುನಃ ದಿನಾಂಕ: 256.07.2006ರಂದು ಮಧ್ಯಾಹ್ನ 1.30 ರೊಳಗೆ ಟೆಂಡರ್ ಫಾರಂಗಳನ್ನು ಪಡೆದುಕೊಳ್ಳಬಹುದು.
2. ಆದಾಯ ತೆರಿಗೆ, ಮಾರಾಟ ತೆರಿಗೆ ಹಾಗೂ ಸಾಲ್ವೆನ್ಸಿ ದೃಢೀಕರಣ ಪತ್ರಗಳನ್ನು ಟೆಂಡರ್ ಫಾರಂ ಜೊತೆಗೆ ಲಗತ್ತಿಸುವುದು.
3. ಅನುಸೂಚಿಯಲ್ಲಿರುವ ಐಟಂಗಳಿಗೆ ಪ್ರತ್ಯೇಕವಾಗಿ ಪ್ರತಿ ಕೆ.ಜಿ.ಗೆ ದರ ನಮೂದಿಸುವುದು.
4. ಟೆಂಡರ್ ಫಾರಂ ಜೊತೆ ನಿಗದಿಪಡಿಸಿದ ಇ.ಎಂ.ಡಿ. ರೂ.17,300/- ಗಳನ್ನು ಯಾವುದೇ ಅಂಗೀಕೃತ ಬ್ಯಾಂಕಿನಿಂದ ಪಡೆದು **"ಡಿಮ್ಯಾಂಡ್ ಡ್ರಾಫ್ಟ್" ರೂಪದಲ್ಲಿ "ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಹಾಸನ ವಿಭಾಗ, ಹಾಸನ" ರವರ** ಹೆಸರಿಗೆ ಪಡೆದುಕ ಲಗತ್ತಿಸಬೇಕು.
5. ಇ.ಎಂ.ಡಿ. ಯನ್ನು ಲಗತ್ತಿಸದೇ ಇರುವ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6. ಆಹಾರ ಪದಾರ್ಥಗಳನ್ನು ಪ್ರತಿ 15 ದಿನಗಳಿಗೊಂದು ಬಾರಿ ಸರಬರಾಜು ಮಾಡುವುದು.
7. ಟೆಂಡರ್ ಫಾರಂಗಳಿಗಾಗಿ ದಿನಾಂಕ: 18.07.2006ರಂದು ಸಾಯಂಕಾಲ 5.30 ಗಂಟೆಯವರೆಗೆ ಮನವಿ ಸಲ್ಲಿಸಬಹುದಾಗಿದೆ. ದಿನಾಂಕ: 19.07.2006ರಂದು ಟೆಂಡರ್ ಬಾರದೇ ಇದ್ದಲ್ಲಿ ದಿನಾಂಕ: 24.07.2006ರಂದು ಮನವಿ ಸಲ್ಲಿಸಬಹುದಾಗಿದೆ.
8. ಟೆಂಡರ್ ಅಂಗೀಕರಿಸುವ ಅಥವಾ ರದ್ದುಪಡಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಅಧಿಕಾರಿಗಳೇ ಕಾಯ್ದಿರಿಸಿಕೊಂಡಿರುತ್ತಾರೆ.

ಹೆಚ್ಚಿನ ವಿವರಗಳನ್ನು ಹಾಗೂ ಷರತ್ತುಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಹಾಸನ ವಿಭಾಗ, ಹಾಸನ ರವರ ಕಛೇರಿ ಅಥವಾ ವಲಯ ಅರಣ್ಯ ಅಧಿಕಾರಿ, ಹಾಸನ ವಲಯ, ಹಾಸನ ರವರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆದುಕೊಳ್ಳಬಹುದು.

**ಕೆ.ಹೆಚ್. ನಾಗರಾಜ್**
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಹಾಸನ ವಿಭಾಗ, ಹಾಸನ.

ಪಿ.ಆರ್.379

**ಸಮಾಜ ಕಲ್ಯಾಣ ಇಲಾಖೆ**
**ಅಧಿಸೂಚನೆ**
**ಸಂಖ್ಯೆ: ಸಕಇ 149: ಪಕಸೇ, 2006, ಬೆಂಗಳೂರು, ದಿನಾಂಕ:27ನೇ ಜೂನ್, 2006**

ಕರ್ನಾಟಕ ಗೆಜೆಟೆಡ್ ಪ್ರೋಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಈ ಕೆಳಕಂಡ ಅಭ್ಯರ್ಥಿಗಳನ್ನು ಜಿಲ್ಲಾ ಅಧಿಕಾರಿ ಹಿಂದುಳಿದ ವರ್ಗಗಳ ಇಲಾಖೆ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಗುಂಪು 'ಎ' ಹುದ್ದೆಗೆ ಆಯ್ಕೆ ಮಾಡಿ ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ:E(1)07/2006-07, ದಿನಾಂಕ:17.04.2006ರ ರಾಜ್ಯಪತ್ರದಲ್ಲಿ ಪ್ರಕಟಿಸಿದೆ.

**ಜಿಲ್ಲಾ ಅಧಿಕಾರಿಗಳು: ಹಿಂದುಳಿದ ವರ್ಗಗಳ ಇಲಾಖೆ**

| Sl. No. | Name of the Candidate | Address |
|---|---|---|
| 1. | Prabhakar H.G. | Hangaravally at Post; Chickmangalore Tq: District-577111. |
| 2. | Pradeep B.S. | BB69, KHB, Qtrs, Kavalbyrasandra, R.T. Nagar, Bangalore-560 032. |
| 3. | Rajappa N. | Village Joldhal Post, Channagiri Tq: Davanagere, District-577213. |
| **ಜಿಲ್ಲಾ ಅಧಿಕಾರಿಗಳು ಪ.ಜಾತಿ/ ಪ.ವರ್ಗಗಳ ಕಲ್ಯಾಣ (ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ)** | | |
| 1. | Shivaramu H.S. | S/o Shivalingaiah H.N. Hebberalu Athgoor Hobli, Maddur Tq: Mandya District-571420. |
| 2. | VenkataravanaReddy E.V. | C/o. S.G. Mohankumar, Patel Venkatappa Complex, SunkadaKatte, Bangalore-560001. |

ಮೇಲ್ಕಂಡ ಅಭ್ಯರ್ಥಿಗಳನ್ನು ರೂ.7400-13120 ವೇತನ ಶ್ರೇಣಿಯ ಜಿಲ್ಲಾ ಅಧಿಕಾರಿ ಹಿಂದುಳಿದ ವರ್ಗಗಳ ಇಲಾಖೆ ಮತ್ತು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಯ ಗುಂಪು 'ಎ' ಹುದ್ದೆಗೆ ಪರಿವೀಕ್ಷಣೆಯ ಮೇಲೆ (On Probation) ಈ ಮೂಲಕ ನೇಮಕ ಮಾಡಲಾಗಿದೆ.

ಈ ಪರೀಕ್ಷಾರ್ಥಿಗಳ ಪರೀಕ್ಷಾರ್ಥ ಅವಧಿಯು ಎರಡು ವರ್ಷಗಳಾಗಿರುತ್ತದೆ. ಈ ಅವಧಿಯಲ್ಲಿ ಪರೀಕ್ಷಾರ್ಥಿಗಳು ಜಿಲ್ಲಾ ಅಧಿಕಾರಿ ಹಿಂದುಳಿದ ವರ್ಗಗಳ ಇಲಾಖೆ, ಮತ್ತು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಗುಂಪು 'ಎ' ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಬೇಕು.

ಈ ನೇಮಕಾತಿಯು ಈ ಕೆಳಕಂಡ ಕರ್ನಾಟಕ ನ್ಯಾಯ ಮಂಡಳಿ ಅರ್ಜಿ ಸಂಖ್ಯೆ:3526/2006 ರಲ್ಲಿ (Sri Elisha Andrews) ನೀಡಿರುವ ಮಧ್ಯಂತರ ಆದೇಶಕ್ಕೆ ಒಳಪಟ್ಟಿದ್ದು, ಈ ಕೆಳಗಿನಂತೆ ಉದ್ಧರಿಸಿದೆ.

"that any appointment pursuant to Notification bearing No: E(1) 41/ 2005-06/ PSC, Dated:04.05.2006 shall be subject to the result of this application"

ಈ ಅಧಿಸೂಚನೆಯನ್ನು ನೊಂದಾಯಿತ ಅಂಚೆ ಮುಖಾಂತರ ರವಾನಿಸಿದ ದಿನಾಂಕದಿಂದ 15 ದಿನಗಳ ಒಳಗಾಗಿ ಅಭ್ಯರ್ಥಿಯು ಆಯುಕ್ತರು, ಹಿಂದುಳಿದ ವರ್ಗಗಳ ಇಲಾಖೆ, ನೃಪತುಂಗ ರಸ್ತೆ, ಸಿ.ಎಫ್.ಸಿ. ಕಟ್ಟಡ ಬೆಂಗಳೂರು ಹಾಗೂ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, 5ನೇ ಮಹಡಿ, ಬಹುಮಡಿ ಕಟ್ಟಡ, ಬೆಂಗಳೂರು ಇವರ ಮುಂದೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ಇದಕ್ಕೆ ತಪ್ಪಿದ್ದಲ್ಲಿ ಅಭ್ಯರ್ಥಿಯ ನೇಮಕಾತಿಯು ರದ್ದಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ಶೇಖರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್.380